ಸಮಾಜ ಪುಸ್ತಕಮಾಲೆ ಧಾರವಾಡ

# ಪ್ರೇಮಪಥ

ದಿವಂಗತ ಶರತ್‌ಬಾಬುಗಳ ಚಿಕ್ಕ ಕಾದಂಬರಿ

ಕನ್ನಡಿಸಿದವರು :— ಶ್ರೀ. ಗುರುನಾಥ ಜೋಶಿ



ಪ್ರಕಾಶಕ :— ಭಾಲಚಂದ್ರ ಘಾಣೇಕರ, ಧಾರವಾಡ



ಮಾರ್ಚ—೧
೧೯೪೦

ಬೆಲೆ ೩ ಆಣೆ

ಮುಂದಿನ ಪುಸ್ತಕ.

ಇದೇ ಗ್ರಂಥಕರ್ತರ

# 'ಮಂಗಲಸೂತ್ರ'

ಶ್ರೀ ಗುರುನಾಥ ಜೋಶಿಯವರು ಸುರಮ್ಯವಾದ ಭಾಷೆಯಲ್ಲಿ ಕನ್ನಡಿಸಿದ್ದಾರೆ.

ಬೆಲೆ ಎರಡಾಣೆ ಮಾತ್ರ

# ಪ್ರೇಮಪಥ

ದಿವಂಗತ ಶರತ್‌ಬಾಬುಗಳ ಚಿಕ್ಕಕಾದಂಬರಿ
ಶ್ರೀ ಗುರುನಾಥ ಜೋಶಿ

## ಪತಿಯನ್ನು ಅಗಲಿದ ಸತಿ

ಮಧ್ಯಮ ತರಗತಿಯ ಪರಿವಾರದ ಹಿರಿಯನು ಕ್ಷಯರೋಗದಿಂದ ಸತ್ತರೆ ಅವನು ತನ್ನ ಮನೆಯವರನ್ನೂ ಅರ್ಧ ಸತ್ತಂತೆಯೆ ಮಾಡಿ ಹೋಗುವನು. ಸುಲೋಚನೆಯ ಪತಿತ ಪಾವನ ಪತಿಯೂ ಸರಿಯಾಗಿ ಇದರಂತೆಯೇ ಮಾಡಿ ಪ್ರಾಣ ನೀಗಿದ. ಒಂದು ಒಂದೂವರೆ ವರ್ಷದ ವರೆಗೆ ಕೊರಗಿ ಒಂದು ದಿನ ಮಳೆಗಾಲದಲ್ಲಿ ಅರ್ಧರಾತ್ರಿಯ ಸುಮಾರಿಗೆ ಕೊನೆಯ ಉಸಿರು ಬಿಟ್ಟ. ನಿನ್ನೆಯ ದಿವಸ ಸುಲೋಚನೆಯು ಪತಿಯಿಂದ ಕೊನೆಯ ಪ್ರಾಯಶ್ಚಿತ್ತವನ್ನು ಮಾಡಿಸಿ ಪತಿದೇವನ ಬಳಿಯಲ್ಲಿ ಕುಳಿತವಳು ಏಳಲಿಲ್ಲ. ಪತಿಯು ಗೊತ್ತಿಲ್ಲದಂತೆ ಸುಮ್ಮನೆ ಪ್ರಾಣವನ್ನು ತ್ಯಜಿಸಿದಂತೆ ಅವಳೂ ಪತಿಯ ಹತ್ತರ ಸುಮ್ಮನೆ ಕುಳಿತಿದ್ದಳು; ಗಲಾಟೆಮಾಡಿ ಇಡಿ ಬೀದಿಯವರನ್ನು ಎಬ್ಬಿಸಲಿಲ್ಲ. ಸ್ವಲ್ಪ ಹೊತ್ತಿನ ಮೊದಲು ಹದಿಮೂರು ವರ್ಷದ ಅವಳ ಕನ್ನೆ ಚಾಪೆಯನ್ನು ಹಾಸಿಕೊಂಡು ಅಲ್ಲಿಯೆ ಮಲಗಿದ್ದಳು. ಅವಳನ್ನೂ ಅವಳು ಎಬ್ಬಿಸಲಿಲ್ಲ. ತಂದೆಯ ಮರಣದ ಒಂದು ಮಾತನ್ನೂ ಅರಿಯಲಿಲ್ಲ. ಮನೆಯಲ್ಲಿ ದಾಸಿಯಿಲ್ಲ, ದಾಸರಿಲ್ಲ, ತನ್ನ ಆಪ್ತರು ಇಷ್ಟರು, ಕುಲಗೋತ್ರದವರು ಯಾರೂ ಬಳಿಯಲ್ಲಿ ಇರಲಿಲ್ಲ. ಬೀದಿಯವರೂ ಶುಶ್ರೂಷೆ ಮಾಡಿ ಮಾಡಿ ದಣಿದಿದ್ದರು. ಇವೊತ್ತು ಸಾಯಂಕಾಲದಿಂದಲೇ ಮಳೆಯು ಪ್ರಾರಂಭವಾದುದರಿಂದ ಎಚ್ಚರ ಇರುವನೆಪದಿಂದ ಮಲಗಲುಬರುವವರೂ ಬರಲಿಲ್ಲ.

ಹೊರಗೆ ಒಂದೇ ಸಮನೆ ಮಳೆಯು ಜಡೆಯುತ್ತಿದ್ದಿತು. ಮನೆಯೊಳಗೆ ಸತ್ತ ಪತಿಯನ್ನು ನೆಟ್ಟ ನೋಟದಿಂದ ನೋಡುತ್ತ ಸುಲೋಚನೆಯು ಕಲ್ಲಿನಂತೆ ಕುಳಿತಿದ್ದಳು. ಮರುದಿನ ಸುದ್ದೀ ಕೇಳಿ ಜನರು ಬಂದರು. ಪದ್ಧತಿಯಂತೆ ಸಿದಿಗೆಯ ಮೇಲೆ ಹೆಣವನ್ನು ಮಸಣಕ್ಕೆ ತೆಗೆದುಕೊಂಡು ಹೋದರು. ಹೆಂಗುಸರು ಗೋಮಯ ಗೋಮೂತ್ರ ಎರಚಿ ಅಳುತ್ತ ಕುಳಿತರು ಪದ್ಧತಿಯ ಪ್ರಕಾರ.

ಸುಲೋಚನೆ ಸಂಪತ್ತಿಯೆಂದರೆ ಒಂದು ಚಿಕ್ಕ ಮಾವಿನ ತೋಪ ಉಳಿದಿದ್ದಿತು. ಅವನ್ನು ಬೀದಿಯವರ ಸಹಾಯದಿಂದ ನೂರು ರೂಪಾಯಿಗಳಿಗೆ ಮಾರಿ ಯಥಾ ಸಮಯಕ್ಕೆ ಪತಿಯ ಕ್ರಿಯೆಯನ್ನು ಮಾಡಿ ಸುಮ್ಮನೆ ಮನೆಯಲ್ಲಿ ಕುಳಿತುಬಿಟ್ಟಳು. ಮಗಳು ಕೇಳಿದಳು "ಮುಂದೇನಮ್ಮಾ ಇನ್ನು ?"

"ಅಂಜಿಕೆಯೇಕೆ ಮಗೂ ? ಪರಮಾತ್ಮನಿರುವ"

ಕ್ರಿಯಾಕರ್ಮ ಮಾಡಿ ಉಳಿದುದರಲ್ಲಿ ಹಾಗೂ ಹೀಗೂ ಮಾಡಿ ಒಂದು ತಿಂಗಳು ಕಳೆದರು. ಆ ಮೇಲೆ ಯಾವ ಮಾರ್ಗವೂ ಕಾಣದಂತಾಯಿತು. ತಾಯಿಯು ಮನೆಗೆ ಬೀಗ ಹಾಕಿ ಮಗಳ ಕೈಯನ್ನು ಹಿಡಿದುಕೊಂಡು ಬೀದಿಗೆ ಬಂದು ನಿಂತಳು.

"ಎಲ್ಲಿಗೆ ಹೋಗುವಿಯಮ್ಮಾ ?"

"ಕಲಕತ್ತೆಗೆ ನಿನ್ನ ಅಣ್ಣನ ಹತ್ತರ"

"ನನ್ನಣ್ಣ ಯಾರಮ್ಮ ? ಎಂದೂ ಅವನ ವಿಚಾರವಾಗಿ ನೀನು ಹೇಳಲೆ ಇಲ್ಲ ?"

ತಾಯಿಯು ಸ್ವಲ್ಪ ತಡೆದು "ಇದು ವರೆಗೆ ಅವನನ್ನು ಮರೆತಿದ್ದೆ, ಮಗೂ."

ಹೇಮನಲಿನಿಯು ಬುದ್ಧಿವಂತೆಯಾದ ಹುಡುಗಿ. ಅವಳು ಸ್ವಲ್ಪ ಹಿಂಜರಿದು "ಬೇಡಮ್ಮ, ಪರಕೀಯರ ಮನೆಗೆ ಹೋಗುವುದು ಬೇಡ. ಮನೆಯಲ್ಲಿಯೆ ಇದ್ದುಕೊಂಡು ಕೂಲಿ-ಕುಂಬಳಿಮಾಡಿ ಜೀವನ ಸಾಗಿಸುವುದು, ಒಣರೊಟ್ಟಿ ಚಟ್ಣಿ ತಿನ್ನುವುದು ಮೇಲು, ಪರಕೀಯರ ಮನೆಯಲ್ಲಿ ಇರುವುದು ಒಳಿತಲ್ಲ ಅಮ್ಮಾ. ನಾನು ಮನೆಯನ್ನು ಬಿಟ್ಟು ಹೋಗಲಾರೆನಮ್ಮಾ" ಎಂದಳು.

ಸುಲೋಚನೆಯು ವ್ಯಾಕುಲಳಾಗಿ "ನಿಲ್ಲಬೇಡ ಹೇಮಾ, ಹೊತ್ತೇರುವುದು" ಎಂದಳು.

ತಾಯಿ-ಮಗಳು ಹೊರಟರು ದಾರಿಯಲ್ಲಿ ಮತ್ತೆ ತಾಯಿಯು ಎಂದಳು ಅವರು ನಿನಗಿಷ್ಟು ಓದಿಸಿರುವರು, ಅದೆಲ್ಲವನ್ನೂ ನೀರಿನಲ್ಲಿ ಹುಣಶೆಹಣ್ಣು ತೊಳೆದ ಹಾಗೆ ಮಾಡಬೇಡ. ನೀನು ನನಗೇ ಹೇಳಬಲ್ಲೆಯೆಂಬುದನ್ನು ನಾನು ಬಲ್ಲೆ ! ತಾಯಿ ಮಗಳು ಮನೆಯಲ್ಲಿದ್ದುಕೊಂಡು ಹೇಗಾದರೂ ಮಾಡಿ ಹೊಟ್ಟೆತುಂಬಿಕೊಳ್ಳಬಹುದು. ಆದರೆ ನಿನ್ನ ಮದುವೆಯನ್ನು ಹೇಗೆ ಮಾಡುವುದು ?"

"ಮದುವೆಯಿಲ್ಲದಿದ್ದರೆ ಇಲ್ಲ !"

"ಜಾತಿಯವರು-ಬಳಗದವರು ಏನೆಂದಾರು ? ಜಾತಿಯಿಂದ ಹೊರಗಿಟ್ಟಾರು."

"ಜಾತಿಯನ್ನು ತೆಗೆದುಕೊಂಡೇನು ಮಾಡುವುದು ಅಮ್ಮಾ ? ತಾಯಿ-ಮಗಳು ಕೂಡಿಕೊಂಡಿರುವೆವು. ಕೂಲಿ-ಕುಂಬಳಿ ಮಾಡಿ ಹೊಟ್ಟೆಹೊರಕೊಳ್ಳುವೆವು. ನಮ್ಮ

ಜಾತಿ ಉಳಿವರೇನು ? ಉಳಿಯುದಿದ್ದರೇನು ? ಜಗತ್ತಿನಲ್ಲಿ ಅದೆಷ್ಟೋ ಜಾತಿಗಳುಂಟು, ಮಗಳ ಮದುವೆ ಮಾಡದಿದ್ದರೆ ಅವು ಅಳಿಯುವು. ನಾವೂ ಅವುಗಳಂತೆಯೆ ಇರುವ. ”

ಮಗಳ ಮಾತು ಕೇಳಿ ದುಃಖದಲ್ಲಿಯೂ ಸುಲೋಚನೆಗೆ ನಗುವು ಬಂದಿತು. ಅವಳೆಂದಳು “ ಆಗಲೂ ಮನೆ ಬಿಡಬೇಕಾದೀತು. ಜಾತಿ ಹೋದ ಮೇಲೆ ನಮ್ಮನ್ನು ಯಾರೂ ಕಸಗೂಡಿಸಲಿಕ್ಕೂ ಕರೆಯಲಿಕ್ಕಿಲ್ಲ. ”

ಹೇಮನಲಿನಿಯು ಮಾರುತ್ತರವನ್ನು ಕೊಡಲಿಲ್ಲ. ಬಹಳ ದುಃಖಪೂರಿತವಾದ ಸಂಗತಿಗಳು ನೆನಪಿಗೆ ಬಂದುವು. ಅನೆಲ್ಲವನ್ನೂ ಪ್ರಯತ್ನಪೂರ್ವಕವಾಗಿ ಹತ್ತಿಕ್ಕಿ ಮೆಲ್ಲಗೆ ಮಾರ್ಗಕ್ರಮಣ ಮಾಡತೊಡಗಿದಳು.

ಮಾರ್ಗವು ಡೊಂಕುಡೊಂಕಾಗಿ ಊರೊಳಗಿಂದ ಹಾಯ್ದು ಶ್ರೀರಾಮಪುರ ಸ್ಟೇಶನ್ನಿಗೆ ಹೋಗಿದ್ದಿತು. ಒಂದು ಒಂದೂವರೆ ಗಾವುದ ಹೋದ ಮೇಲೆ ಮಾರ್ಗದಲ್ಲಿ ಸಿದ್ಧೇಶ್ವರಿಯ ಮಂದಿರವು ಬಂದಿತು. ಅಲ್ಲಿ ಸ್ವಲ್ಪ ತಡೆದು ಇಬ್ಬರೂ ಭಕ್ತಿಯಿಂದ ದೇವಿಯ ದರ್ಶನ ತೆಗೆದುಕೊಂಡರು. ಮಂದಿರದಿಂದ ಹೊರಗೆ ಬಂದ ಮೇಲೆ ಮಗಳೆಂದಳು “ ಅಮ್ಮಾ, ಬೆಳಗಾಯಿತು. ಇನ್ನು ನಡೆಯಲು ನಾಚಿಕೆಯಾಗುತ್ತಿದೆ ನನಗೆ. ”

ಸುಲೋಚನೆಗೂ ಈ ರೀತಿ ನಡೆಯುವ ಅಭ್ಯಾಸವಿರಲಿಲ್ಲ, ಅವಳಿಗೂ ನಾಚಿಕೆಯಾಗುತ್ತಿದ್ದಿತು. ಒಬ್ಬ ಮುದುಕಿಯು ಗಂಗಾಸ್ನಾನಕ್ಕೆ ಹೊರಟಿದ್ದಳು. ಆಕೆಯನ್ನು ಕೇಳಿದಳು “ಅಮ್ಮಾ, ಶ್ರೀರಾಮಪುರದ ದಾರಿ ಇದೇ ಅಲ್ವೆ ? ”

ಮುದುಕಿಯು ಸ್ವಲ್ಪ ಲಕ್ಷ್ಯಗೊಟ್ಟು ಇವರನ್ನು ನೋಡಿ “ ಎಲ್ಲಿಂದ ಬರುತ್ತಿರುವೆಯಮ್ಮಾ ಮಗೂ ? ” ಎಂದಳು.

ಸುಲೋಚನೆಯು ಆಕೆಯ ಮಾತಿಗೆ ಉತ್ತರವನ್ನೀಯದೆ ಪುನಃ ಕೇಳಿದಳು “ ಸ್ಟೇಶನ್ನಿಗೆ ಹೋಗಲು ಮತ್ತಾವ ದಾರಿಯೂ ಇಲ್ಲೇನಮ್ಮಾ ? ”

ಮಂದಿರದ ಎದುರಿಗಿಂದ ಒಂದು ಅಗಲವಾಗಿಲ್ಲದ ಓಣಿಯಿದೆ. ಅದು ನೇರವಾಗಿ ಶ್ರೀರಾಮಪುರದ ಸ್ಟೇಶನ್ನಿನ ವರೆಗೂ ಹೋಗಿದೆ. ಮುದುಕಿಯು ಆ ಓಣಿಯನ್ನು ತೋರಿಸಿ “ ಈ ಓಣಿಯು ಬ್ರಾಹ್ಮಣರ ಮನೆಗಳ ಮುಂದಿನಿಂದ ಹಾಯ್ದು ನೇರಾಗಿ ಸ್ಟೇಶನ್ನಿನ ವರೆಗೂ ಹೋಗಿದೆ. ಇದೇ ಓಣಿಯಿಂದ ಹೋದರೆ ಸ್ಟೇಶನ್ನಿಗೆ ಹೋಗುವಿರಿ. ಯಾವ ಭಯವೂ ಇಲ್ಲ, ಮಗೂ ಹೋಗಿರಿ. ಯಾರೂ ಏನೂ ಎನ್ನುವುದಿಲ್ಲ. ” ಎಂದಳು.

ಸುಲೋಚನಾ ದುಗುಡವಿಲ್ಲದೆ ಮಗಳ ಕೈಹಿಡಿದುಕೊಂಡು ಆ ಬೀದಿಯಿಂದ ಮುನ್ನಡೆದಳು.



# ಗುಣೇಂದ್ರನ ಭೆಟ್ಟಿ

೧

ಅಮಹರ್ಸ್ಟ್ ಸ್ಟ್ರೀಟ್‌ನಲ್ಲಿ ಗುಣೇಂದ್ರನ ಭವ್ಯವಾದ ವಿಶಾಲವಾದ ಮನೆಯು ಖಾಲಿಯಾಗಿಯೆ ಇದೆ. ಮೂರನೆಯ ಅಂತಸ್ತಿನ ಒಂದು ಕಿರುಮನೆಯಲ್ಲಿ ಅವನು ಮಲಗುವನು, ಇನ್ನೊಂದರಲ್ಲಿ ಓದುವನು, ಬರೆಯುವನು. ಉಳಿದ ಮೇಲಿನ ಮತ್ತು ಕೆಳಗಿನ ಕಿರುಮನೆಗಳೆಲ್ಲ ಬರಿದಾಗಿಯೆ ಇವೆ. ಹೂಂ, ಕೆಳಗಿನ ಒಂದು ಕಿರುಮನೆಯಲ್ಲಿ ಅಡಿಗೆಯುವನೂ ಇನ್ನೊಂದರಲ್ಲಿ ಆಳುಮಕ್ಕಳು ಮಾತ್ರ ಇರುವರು.

ಗುಣೇಂದ್ರನ ತಂದೆಯವರು ಕಬ್ಬಿಣದ ವ್ಯಾಪಾರಮಾಡುತ್ತಿದ್ದರು. ಸಾಯುವಾಗ ಅವರು ಅಪಾರ ಸಂಪತ್ತು ಗುಣೇಂದ್ರನಿಗಾಗಿ ಬಿಟ್ಟು ಹೋಗಿರುವರು. ಈ ಒಬ್ಬ ಮಗನ ಹೊರತು ಹತ್ತು ಜನ ಮಕ್ಕಳಿದ್ದರೂ ಸುಖವಾಗಿ ದುಡಿಯದೆ ಜೀವಿಸಬಹುದಾಗಿದ್ದಿತು. ತಂದೆಯ ಮರಣದ ನಂತರ ಕಬ್ಬಿಣದ ಅಂಗಡಿಯನ್ನು ಮಾರಿ ಬಂದ ಹಣವನ್ನೂ ಮನೆಯಲ್ಲಿದ್ದ ಹಣವನ್ನೂ ಬ್ಯಾಂಕಿನಲ್ಲಿಟ್ಟು ನಿಶ್ಚಿಂತೆಯಿಂದ ಗುಣೇಂದ್ರ ವಕೀಲಿಯನ್ನು ಮಾಡುತ್ತಿದ್ದ. ಬೆಳಗ್ಗೆ ಹತ್ತುಗಂಟೆಯಾಗಿದ್ದರೂ ಪುಸ್ತಕ ಓದುತ್ತ ಕುಳಿತಿದ್ದ. ಆಗ ಆಳುಮಗ ಬಂದು ಹೇಳಿದ “ ಬಾಬೂಜೀ,ಸ್ನಾನದ ಸಮಯವಾಗಿದೆ. ”

“ ಬಂದೆ ” ಎಂದು ಮತ್ತೆ ಓದತೊಡಗಿದ.

ಸ್ವಲ್ಪ ಸಮಯವಾದ ಮೇಲೆ ಮತ್ತೆ ಬಂದು ಆಳು ಮಗ ಎಂದ “ ಬಾಬೂಜೀ, ಇಬ್ಬರು ಹೆಂಗುಸರು ಬಂದಿರುವರು. ನಿಮ್ಮನ್ನು ಕಾಣಬಯಸುವರು. ”

ಗುಣೇಂದ್ರನಿಗೆ ಆಶ್ಚರ್ಯವಾಯಿತು. ಅವನು ಪುಸ್ತಕದಿಂದ ದೃಷ್ಟಿಯನ್ನು ಕಿತ್ತು ಕೇಳಿದ “ ನನ್ನನ್ನು ? ”

“ ಹೌದು, ಬಾಬೂಜಿ, ನಿಮ್ಮನ್ನೇ ಕಾಣಬೇಕೆನ್ನುವರು. ನಿಮ್ಮ....”

ಮಾತು ಮುಗಿದಿರಲಿಲ್ಲ, ಸುಲೋಚನೆಯು ಕಿರುಮನೆಯನ್ನು ಪ್ರವೇಶಿಸಿದಳು. ಗುಣೇಂದ್ರ ಪುಸ್ತಕ ಮುಚ್ಚಿ ಎದ್ದು ನಿಂತ.

ಸುಲೋಚನಾ ಆಳುಮಗನ ಕಡೆಗೆ ತಿರುಗಿ “ ನೀನು ಹೋಗು, ನಿನ್ನ ಕೆಲಸ ಮಾಡು ” ಎಂದಳು.

ಆಳುಮಗನು ಹೋದ ಮೇಲೆ ಸುಲೋಚನಾ ಎಂದಳು “ ಗುಣೀ, ನಿನ್ನ ತಂದೆಯವರೆಲ್ಲಿ ಮಗೂ ?

ಗುಣೇಂದ್ರ ವಿಸ್ಮಯಪೂರಿತನಾಗಿ ನಿಂತು ಬಿಟ್ಟ. ಉತ್ತರ ಕೊಡದಾದ.

ಸುಲೋಚನಾ ಸ್ವಲ್ಪ ನಕ್ಕು "ನನ್ನ ಮುಖ ನೋಡಿ, ಈಗ ಗುರುತಿಸ ಲಾರೆಯಾ ನೀನು, ಗುಣಿ! ಸುಮಾರು ಹನ್ನೆರಡು ವರ್ಷಗಳ ಹಿಂದೆ ಈ ಮನೆಯಪಕ್ಕ ದಲ್ಲಿಯೆ ನಾವು ಇರುತ್ತಿದ್ದೆವು. ನಿನ್ನ ಉಪನಯನವಾದ ವರುಷವೇ ನಾವು ಹಳ್ಳಿಗೆ ಹೋಗಿದ್ದೆವು. ನಿನ್ನ ತಂದೆಯವರು ಅಂಗಡಿಗೆ ಹೋಗಿರುವರೇನು?"

ಗುಣೇಂದ್ರನೆಂದ "ತಂದೆಯವರು ತೀರಿಕೊಂಡು ಮೂರು ವರ್ಷಗಳಾ ದುವು."

"ಅಯ್ಯೋ, ಅವರು ತೀರಿಕೊಂಡರೆ! ನಿನ್ನ ಅತ್ತೆ?"

"ಅವಳೂ ಇಲ್ಲ. ತಂದೆಯವರಿಗಿಂತ ಮೊದಲೇ ತೀರಿದಳು."

ಸುಲೋಚನೆಯು ನೀಳವಾದ ಉಸಿರುಬಿಟ್ಟು ಎಂದಳು "ನಾನು ಒಬ್ಬಳೆ ಉಳಿದೆನೆ? ಎಲ್ಲರೂ ಹೊರಟುಹೋದರು. ನಿನ್ನ ತಾಯಿ ತೀರಿದಾಗ ನೀನು ಏಳು ವರುಷದವನಿದ್ದೆ. ಬಳಿಕ ನಿನ್ನ ಉಪನಯನವಾಗುವವರೆಗೆ ನಾನೇ ನಿನ್ನನ್ನು ಸಲಹಿದ್ದೆ. ಏನು ಗುಣೀ, ನೀನು ನಿನ್ನ ಚಿಕ್ಕಮ್ಮನನ್ನು ಮರೆತುಬಿಟ್ಟೆಯಾ?"

ಗುಣೇಂದ್ರ ಕೂಡಲೆ ಶಿರಸಾವಂದಿಸಿದ. ಪಾದಧೂಳಿಯನ್ನು ಮಸ್ತಕದ ಮೇಲಿರಿಸಿಕೊಂಡು "ನೀನು, ಚಿಕ್ಕಮ್ಮ?" ಎಂದ.

ಸುಲೋಚನಾ ತನ್ನ ಕೈ ಮುಂದೆ ನೀಡಿ ಅವನ ಗದ್ದವನ್ನು ಹಿಡಿದು ತನ್ನ ಬೆರಳುಗಳನ್ನು ಚುಂಬಿಸಿ ಎಂದಳು "ಹೌದು ಮಗೂ, ನಾನೇ ನಿನ್ನ ಚಿಕ್ಕಮ್ಮ."

ಗುಣೇಂದ್ರ ಒಂದು ಸ್ಟೂಲು ಸರಿಸಿ "ಕುಳಿತುಕೊ ಚಿಕ್ಕಮ್ಮ!" ಎಂದ.

ಸುಲೋಚನೆಯು ನಸುನಕ್ಕು "ನಿನ್ನ ಆಶ್ರಯಕ್ಕೆ ಬಂದಮೇಲೇನು ಕುಳಿತು ಕೊಳ್ಳದಿರುವೆನೆ? ಏನೊ, ನೀನಿನ್ನೂ ಮದುವೆಮಾಡಿಕೊಂಡಿಲ್ಲವೆ? ಎಂದಳು.

ಗುಣೇಂದ್ರ ಈಗ ನಕ್ಕು "ವಯಸ್ಸೆಲ್ಲಾಗಿದೆ ಇನ್ನೂ?" ಎಂದ.

ಸುಲೋಚನೆಯೆಂದಳು "ಆಗಿದೆ ಈಗ. —ಮನೆಯಲ್ಲಾರೂ ಹೆಂಗುಸ ರಿಲ್ಲೇನು?"

"ಇಲ್ಲ."

"ಅಡಿಗೆಯಾರು ಮಾಡುವರು?"

"ಅಡಿಗೆಯವ."

ಸುಲೋಚನೆಯೆಂದಳು "ಇನ್ನು ಅಡಿಗೆಯವನೇನೂ ಬೇಡ. ನಾನೇ ಮಾಡುವೆ. ಒಳ್ಳೇದು, ಇರಲಿ ಈ ಮಾತು. ನನಗೆ ಇನ್ನೊಂದೆರಡು ಮಾತು ಹೇಳ ಬೇಕಾಗಿದೆ. ಈಗಲೆ ಹೇಳಿಬಿಡುವೆ. ಹೇಮನಲಿನಿಯ ತಂದೆಯವರಿಗೆ ಇಲ್ಲಿಯ ಕೆಲಸ

ತೀರಿದ ಮೇಲೆ ನಾವು ಹಳ್ಳಿಗೆ ಹೋದೆವು. ಹತ್ತಿರ ಸ್ವಲ್ಪ ರೂಪಾಯಿಗಳಿದ್ದುವು. ಜಮೀನೂ ಇದ್ದುವು. ಹಳ್ಳಿಯಲ್ಲಿ ಇಷ್ಟರಿಂದಲೆ ನಮ್ಮ ಸಂಸಾರ ಸುಖದಿಂದ ಸಾಗುತ್ತಿದ್ದಿತು. ಹೋದ ವರುಷ ಅವರಿಗೆ ಕ್ಷಯರೋಗ ಅಂಟಿಕೊಂಡಿತು. ಆರೈಕೆ ಮಾಡಿಸುವುದಕ್ಕೂ, ಬೆಟ್ಟದ ಪ್ರದೇಶಕ್ಕೆ ಹೋಗುವುದಕ್ಕೂ ಹತ್ತರ ಇದ್ದುದೆಲ್ಲ ಹೊರಟುಹೋಯಿತು. ಆದರೆ ಕೊನೆಗೂ ಅವರನ್ನು ಉಳಿಸಿಕೊಳ್ಳದೆ ಹೋದೆ. ಅವರು ತೀರಿಕೊಂಡು ಒಂದು ತಿಂಗಳಾಯಿತು ಈಗ ನಿನ್ನನ್ನೇ ಅವಲಂಬಿಸಿಕೊಂಡಿರುವೆವು. ಊಟಕ್ಕಷ್ಟು ಹಾಕಿದರಾಯಿತು, ಇಷ್ಟೇ ನಿನ್ನಲ್ಲಿ ಬಿನ್ನಹ. *

ಸುಲೋಚನೆಯ ಲೋಚನಗಳಿಂದ ಕಂಬನಿಗಳು ಉದುರತೊಡಗಿದುವು; ಗುಣೇಂದ್ರನ ಕಣ್ಣುಗಳೂ ನೀರಲ್ಲಿ ತೇಲಾಡದೆ ಇರಲಿಲ್ಲ.

ಅವನು ಕಾತರನಾಗಿ “ಮಗನು ತಾಯಿಗೆ ಊಟಕ್ಕೆ ಹಾಕಲಿಕ್ಕಿಲ್ಲವೆಂದು ಬಗೆದು ಬಂದಿರುವೆಯೇನು ಚಿಕ್ಕಮ್ಮ?” ಎಂದ.

ಸುಲೋಚನೆಯು ಸೆರಗಿನಿಂದ ಕಣ್ಣು ಒರಸಿಕೊಳ್ಳುತ್ತ “ಇಲ್ಲ, ಮಗೂ. ಹೀಗೆ ಬಗೆದಿದ್ದರೆ ಇಂಥ ದುಃಖದಲ್ಲಿಯೂ ನಾನಿಲ್ಲಿಗೆ ಬರುತ್ತಿರಲಿಲ್ಲ. ನೀನು ಚಿಕ್ಕವನಿದ್ದಾಗ ನೋಡಿ ಹೋಗಿದ್ದೆ. ಇವೊತ್ತಿಗೆ ಹನ್ನೆರಡು ವರುಷಗಳಾದಮೇಲೆ ಈ ವಿಪತ್ಕಾಲದಲ್ಲಿ ನಿನ್ನ ನೆನವು ಬಂದಿತು. ಯಾವ ಸಂಕೋಚವಿಲ್ಲದೆ ಇಲ್ಲಿಗೆ ಬಂದುಬಿಟ್ಟಿರುವೆ. ಅಲ್ಲದೆ ಇನ್ನೂ ಒಂದು ವಿಷಯವಿದೆ. ನನ್ನ ಮಗಳು—ಹೇಮನಲಿನಿ—ನಿನ್ನ ತಂಗಿಯೆಂದೇ ಭಾವಿಸಿಕೊ-ನನಗಿಂತಲೂ ಹೆಚ್ಚು ಅನಾಥಿಯಾಗಿರುವಳು. ಮದುವೆಯ ವಯಸ್ಸಾಗಿದ್ದರೂ ಇದುವರೆಗೆ ಅವಳ ಕೈಗೆ ಕಂಕಣ ಕಟ್ಟಲಾರದವಳಾಗಿರುವೆ. ಆಕೆಯ ಸಲುವಾಗಿ ನೀನೇ ಪ್ರಯತ್ನ ಮಾಡಬೇಕಾಗುವುದು!

“ಅವಳನ್ನು ಜೊತೆಯಲ್ಲೇಕೆ ಕರೆತರಲಿಲ್ಲಮ್ಮ?”

“ಅವಳನ್ನೂ ಕರೆದುಕೊಂಡು ಬಂದಿದ್ದೇನೆ. ಅವಳಿಗೆ ಅಭಿಮಾನ ಬಹಳ. ಇವೆಲ್ಲ ಮಾತುಗಳನ್ನು ಕೇಳಬಾರದೆಂದು ಕೆಳಗೇ ಬಿಟ್ಟುಬಂದಿರುವೆ.”

ಗುಣೇಂದ್ರ ವ್ಯಸ್ತನಾಗಿ ಗಟ್ಟಿಯಾಗಿ ಆಳುಮಗನನ್ನು ಕೂಗಿ ಎಂದ ‘ನಂದಾ, ಕೆಳಗೆ ಹೇಮಾ ಕುಳಿತಿದ್ದಾಳೆ. ಬೇಗ ಮೇಲೆ ಕರೆದುಕೊಂಡು ಬಾ.’

“ಆಕೆಯನ್ನು ಮಾರ್ಗಕ್ಕೆ ಹಚ್ಚಬೇಕಾದರೆ ನೀನು ಖರ್ಚು ಮಾಡಬೇಕಾಗುವುದು. ಆ ಋಣದಿಂದ ನಾನು ಮುಕ್ತ........” ಎನ್ನುತ್ತಿದ್ದಳು ಸುಲೋಚನಾ. ನಡುವೇ ಬಾಯಿಹಾಕಿ “ಹೀಗಾಡಲಾರಂಭಿಸಿದರೆ ನೋಡಮ್ಮಾ, ನಾನೆದ್ದು ಹೊರಗೆ ಹೋಗುವೆ. ಆ ಮೇಲೆ ಏನು ಬೇಕೋ ಅದನ್ನು ಹೇಳಿಕೊ. ನನ್ನ ತಾಯಿ ತೀರಿದ ಮೇಲೆ ನನ್ನನ್ನು ಸಲಹಿ ಬೆಳೆಯಿಸಿದ ಋಣದ ವಿಚಾರವನ್ನು ನಾನು

ಹೇಳಲಾರಂಭಿಸಿದರೆ ನೀನು ನಾಚಿಕೆಯಿಂದ ಇಲ್ಲಿಂದ ಎದ್ದು ಹೋದೀ ? ಆ ಮಾತು ಗಳನ್ನು ಆಡದಿರುವುದೇ ವಿಹಿತ. ನೀನೂ ಸುಮ್ಮಗಿರು, ನಾನೂ ಸುಮ್ಮಗಿರುವೆ" ಎಂದ ಗುಣೇಂದ್ರ.

ಸುಲೋಚನೆಯು ನಗುತ್ತ ಎನ್ನತೊಡಗಿದಳು "ಇರಲಿ ಬಿಡು ಹಾಗಾದರೆ ಈ ಮಾತು. ಹೇಮಾ, ಬರುತ್ತಿರುವಳು, ಕೇಳಿಯಾಳು. ಹೌದು, ಇನ್ನೊಂದು ಮಾತಿದೆ. ನಾನು ತಾಯಿಯಾಗಿ ಹೀಗೆ ಹೇಳುತ್ತಿರುವೆನೆಂದು ಭಾವಿಸಬೇಡ. ನೀನೇ ನೋಡು ಹೇಮಾನ್ನ ಅವಳರೂಪ-ಗುಣ-ಸ್ವಭಾವದಿಂದ ಯಾವನಿಗೂ ಅಯೋಗ್ಯವಾಗಲಿಕ್ಕಿಲ್ಲ. ಆಕೆಯ ತಂದೆಯವರು ಅವಳಿಗೆ ಬಹಳವಾಗಿ ಓದಿಸಿದ್ದಾರೆ. ಕೊನೆಕೊನೆಗೆ ಓದುವುದರ ವಿನಾ ಮತ್ತೇನೂ ಮಾಡಬೇಕಾಗುತ್ತಿರಲಿಲ್ಲ ಆಕೆಗೆ. ಹೇಮಾ ಯಾರ ಮನೆಗೆ ಹೋಗುವಳೋ ಅವರ ಮನೆ ಬೆಳಗುವುದು, ಇದರಲ್ಲಿ ಸಂದೇಹವಿಲ್ಲ. ಹೇಮಾ, ಬಾ ಮಗೂ ಇತ್ತ. ಇವರು ನಿನ್ನ ಗುಣೇಂದ್ರ ಅಣ್ಣ ನಮಸ್ಕಾರ ಮಾಡಮ್ಮಾ.

ಹೇಮಾ ಕಿರುಮನೆಯಲ್ಲಿ ಬಂದು ಮೊಳಕಾಲೂರಿ ನಮಸ್ಕರಿಸಿ ತಲೆಬಾಗಿಸಿ ಕೊಂಡು ನಿಂತಳು. ಮಾರ್ಗಾಯಾಸದಿಂದ ಬಳಲಿದ ಮುಖವನ್ನು ನೋಡಿ ಗುಣೇಂದ್ರ ಕಿಂಕರ್ತವ್ಯಮೂಢನಾಗಿ ನಿಂತುಬಿಟ್ಟ. ಸುಲೋಚನೆಯು ಇದನ್ನು ನೋಡಿಯೆ ಏನೊ ಎಂದಳು. "ಗುಣೇಂದ್ರ, ಹೇಮಾನ್ನ ನಿನ್ನ ಕೈಗೆ ಕೊಡುತ್ತಿದ್ದೆ ದೇಶಾಚಾರವು ವಿಘ್ನವನ್ನುಂಟುಮಾಡದಿದ್ದರೆ. ನಾನು ಸತ್ತರೆ ಹೇಮಾ ಹತ್ತು ದಿವಸ ಸೂತಕ ಮಾಡಬೇಕಾಗುವುದು, ನೀನು ಮೂರು ದಿವಸ ಮಾತ್ರ. ಈ ಧರ್ಮದಿಂದ ನೋಡಿ ದರೆ ಹೇಮಾ ನಿನಗೆ ತಂಗಿಯಾಗಬೇಕು."

ಗುಣೇಂದ್ರ ಸ್ವಲ್ಪ ತನ್ನನ್ನು ಸಂಬಾಳಿಸಿಕೊಂಡು ಎಂದ "ಕೇಳಿದೆಯಾ ಹೇಮಾ, ನಮ್ಮಿಬ್ಬರ ತಾಯಿಯು ಒಬ್ಬಳೆ. ತಾಯಿಯ ಮನೆಯಲ್ಲಿ ನೀನು ಹೇಗಿ ರುವೆಯೊ ಹಾಗೆಯೆ ನಾನೂ ಇರುವೆ. ನಡೆ, ನಿನ್ನ ಊಟ-ಉಡಿಗೆಯ ವ್ಯವಸ್ಥೆ ಮಾಡಿಬರುವೆ."

ಸುಲೋಚನಾ ಒಮ್ಮೆಗೇ ಕೇಳಿದಳು "ಗುಣೇ, ನಿನ್ನ ಕತ್ತಿನಲ್ಲಿ ಜನಿವಾರವು. ಕಾಣಿಸುವುದಿಲ್ಲವಲ್ಲ !"

ಗುಣೇಂದ್ರ ತನ್ನ ಕತ್ತಿನ ಕಡೆಗೆ ನೋಡಿಕೊಳ್ಳುತ್ತ ನಗುತ್ತ "ನಾವು ಬ್ರಹ್ಮ ಸಮಾಜಿಗಳು ಆಗಿರುವೆವು !" ಎಂದ.

"ಬ್ರಹ್ಮಸಮಾಜಿ ? ಛಿಃ, ಮಗೂ ನೀನಿದನ್ನು ಚೆನ್ನಾಗಿ ಮಾಡಲಿಲ್ಲ. ಒಳ್ಳೇದು, ನೀನು ಪ್ರಾಯಶ್ಚಿತ್ತ ಮಾಡಿಕೊಂಡು ಜನಿವಾರ ಧರಿಸು."

“ ತಂದೆಯವರೇ ಹೀಗೆ ಮಾಡಿರುವರು. ನಾನು ಮಾಡಲಿಲ್ಲ. ಆದರೆ ಇದಕ್ಕಾಗಿ ಪ್ರಾಯಶ್ಚಿತ್ತವನ್ನೇಕೆ ಮಾಡಿಕೊಳ್ಳಬೇಕೆನ್ನುವುದು ತಿಳಿಯದಾಗಿದೆ ಬ್ರಾಹ್ಮಮತವೂ ಕೇಟ್ಟುದಿಲ್ಲ. ”

ಸುಲೋಚನೆಯ ಅಂತಃಕರಣಕ್ಕೆ ಏಟು ತಗಲಿದಂತಾಯಿತು. ಅವಳು ಕುಳಿತು ಬಿಟ್ಟಳು. ಸ್ವಲ್ಪ ಸಮಯದ ನಂತರ ಒಂದು ನಿಟ್ಟುಸಿರುಬಿಟ್ಟು ಎಂದಳು “ ಜನಗಳಿಗೆ ಇಂಥ ಕೊನೆ-ಮೊದಲಿಲ್ಲದ ಅಸಡ್ಡೆ ಮಾತುಗಳು ಹೇಗೆ ಮನಸ್ಸಿಗೆ ಬರುತ್ತವೊ. ”

ಗುಣೇಂದ್ರ ನಕ್ಕು ನುಡಿದ “ ಕೊನೆ-ಮೊದಲಿಲ್ಲದ ಅಸಡ್ಡೆ ಮಾತುಗಳ ವಿಚಾರ ಆ ಮೇಲಾಗಲಿ, ಅಮ್ಮ. ಈಗ ನೀನು ಅಡಿಗೆ ಮನೆಗೆ ನಡೆ. ”



# ಹೇಮನಲಿನಿ ಗುಣೇಂದ್ರರ ವಿಶೇಷ ಪರಿಚಯ

೩

ದಾರಿಕಾರನು ಮರದಡಿಯಲ್ಲಿ ಅನ್ನವನ್ನು ಮಾಡಿ ಉಂಡು ಮಣ್ಣಿನ ಮಡಿಕೆಯನ್ನು ಎಸೆದು ಹಿಂತಿರುಗಿ ನೋಡದೆ ಹೊರಟು ಹೋಗುವಂತೆಯೆ ನೂರಕ್ಕೆ ತೊಂಬತ್ತೊಂಬತ್ತು ಜನರು ಸರಸ್ವತಿಯಿಂದ ಕೆಲಸವನ್ನು ತೆಗೆದುಕೊಂಡು ಲಕ್ಷ್ಮಿಯ ರಾಜಮಾರ್ಗದಲ್ಲಿ ಸೆದು ಹೊರಡುತ್ತಾರೆ. ಅವಳು ಬದುಕಿರುವಳೋ ಇಲ್ಲವೊ ಎಂಬುದನ್ನು ಹಿಂತಿರುಗಿ ನೋಡುವುದಿಲ್ಲ. ಆದರೆ ಗುಣೇಂದ್ರ ಅಂತಹ ಜನರಲ್ಲೊಬ್ಬನಲ್ಲ. ಅವನ ಎಣಿಕೆಯು ಆ ತೊಂಬತ್ತೊಂಬತ್ತು ಜನಗಳನ್ನುಳಿದು ಒಬ್ಬರಲ್ಲಿ ಆಗುತ್ತಿದೆ. ಮೊದಲಿನಿಂದ ಯಾವ ರೀತಿಯಾಗಿ ಸರಸ್ವತಿಯಲ್ಲಿ ಶ್ರದ್ಧೆವಿಶ್ವಾಸಗಳನ್ನಿಟ್ಟುಕೊಂಡಿದ್ದನೊ ಆಕೆಯ ಸೇವೆಯನ್ನು ಮಾಡಿದ್ದನೊ ಅದೇ ರೀತಿಯಾಗಿ ವಕೀಲನಾದಮೇಲೂ ಮಾಡುತ್ತಿದ್ದನು. ಅವನ ಓದುವರೂಮು ಪುಸ್ತಕಗಳಿಂದ ತುಂಬಿದ್ದಿತು. ಅದೇ ರೂಮಿನಲ್ಲಿ ಹೇಮನಲಿನಿಗೆ ಆಶ್ರಯವು ದೊರೆಯಿತು. ಒಂದು ಪುಸ್ತಕವನ್ನು ತೆಗೆದುಕೊಂಡ ಬಳಿಕ ಪುನಃ ಅದನ್ನು ಓದಿ ಮುಗಿಸಿದೊಡನೆ ಇದ್ದ ಸ್ಥಳದಲ್ಲಿಯೆ ಇಡುವ ಅಭ್ಯಾಸವಿರಲಿಲ್ಲ ಗುಣೇಂದ್ರನಿಗೆ. ಒಂದು ಸಲ ಕಪಾಟಿನಿಂದ ಹೊರಬಿದ್ದು ಬಂದ ಪುಸ್ತಕವು ಟೇಬಲ್ಲಿನ ಮೇಲೆ, ಕುರ್ಚಿಯ ಮೇಲೆ, ಹಾಸಿಗೆಯ ಮೇಲೆ ಬಿದ್ದುಕೊಡಿರುತ್ತಿದ್ದಿತು. ಒಂದುದಿನ ನಂದಾನ ಕೈಗೆ ಸಿಕ್ಕು ಕಪಾಟನ್ನು ಸೇರುತ್ತಿದ್ದಿತು. ಪುನಃ ಅದು ಬೇಕೆಂದೆನಿಸಿದರೆ ಹುಡುಕಿ ತೆಗೆಯುವುದು ಕಷ್ಟಸಾಧ್ಯವೆ ಆಗಿರುತ್ತಿದ್ದಿತು. ಅವನ ಹತ್ತರ ಪುಸ್ತಕಗಳ ಪಟ್ಟಿಯೊಂದಿದ್ದಿತು. ಪುನಃ ಅದು ಬೇಕೆಂದೆನಿಸಿದರೆ ಹುಡುಕಿ ತೆಗೆಯುವುದು ಕಷ್ಟಸಾಧ್ಯವೆ!ಆಗಿರುತ್ತಿದ್ದಿತು. ಅವನ ಹತ್ತರ ಪುಸ್ತಕಗಳ ಪಟ್ಟಿಯೊಂದಿದ್ದಿತು, ಆದರೆ ಅದರ ಉಪಯೋಗವು ಆಗುತ್ತಿದ್ದಿತೊ ಇಲ್ಲವೊ ಹೇಳುವುದು ಕಷ್ಟವೆ !

ಹೇಮಾ ಈ ಅಸ್ತವ್ಯಸ್ತತೆಯನ್ನು ಒಂದೆರಡೆ ದಿನಗಳಲ್ಲಿ ಸರಿಪಡಿಸಿದಳು. ಒಂದು ದಿನ ಅವಳು ಕಪಾಟಿನಲ್ಲಿಯ ಎಲ್ಲ ಪುಸ್ತಕಗಳನ್ನು ತೆಗೆದು ಕೆಳಗಿರಿಸುತ್ತಿದ್ದಳು, ಅಷ್ಟರಲ್ಲಿ ಗುಣೇಂದ್ರ ಬಂದ. ಅವನನ್ನು ನೋಡಿ “ಗುಣೇಂದ್ರಣ್ಣಾ, ಈ ಪುಸ್ತಕಗಳನ್ನು ಆ ಕಪಾಟಿನಲ್ಲಿ, ಆ ಕಪಾಟಿನಲ್ಲಿಯ ಪುಸ್ತುಕಗಳನ್ನು ಈ ಕಪಾಟಿನಲ್ಲಿ ಇರಿಸಿದರೆ ಹೆಚ್ಚು ಅನುಕೂಲವಾಗುವುದು” ಎಂದಳು.

ಗುಣೇಂದ್ರ ನಸುನಗುತ್ತಾ “ಏನು ಅನುಕೂಲವಾಗುವುದು ?” ಎಂದ.

" ಓಹೋ, ಸರಿಸರಿ, ಅನುಕೂಲವಾಗದೇನು ? ನೋಡಬಾರದೆ ಈ ಪುಸ್ತಕ ಗಳನ್ನು ಇಲ್ಲಿಡುವುದರಿಂದ........"

" ಹೌದು ಹೌದು, ನೋಡುತ್ತಿದ್ದೇನೆ. ಅವನ್ನು ಅಲ್ಲಿಡುವುದರಿಂದ ಅನುಕೂಲ ವಾಗುವುದು ! "

ಹೇಮಾ ಸ್ವಲ್ಪ ಕೋಪಿಸಿಕೊಂಡು ಒಂದು ಸ್ಟೂಲಿನ ಮೇಲೆ ಕುಳಿತಳು " ಇರಲಿ ಬಿಡು ಹಾಗಾದರೆ, ನಾನು ಅವನ್ನು ಅಲ್ಲಿಡುವುದೇ ಇಲ್ಲ. ಚೆನ್ನಾಗಿ ಮಾಡ ಹೋದರೆ, ನಿನ್ನ ಮನಸ್ಸಿಗೇ ಬರುವುದಿಲ್ಲ. "

ಗುಣೇಂದ್ರ ಒಂದು ಪುಸ್ತಕ ಎತ್ತಿಕೊಂಡು ನಸುನಗುತ್ತ ಹೊರಗೆ ಹೊರಟು ಹೋದ.

ಹೇಮಾ ಹಗಲೂರಾತ್ರಿ ಇದೇ ರೂಮಿನಲ್ಲಿರುತ್ತಿದ್ದಳು. ಗುಣೇಂದ್ರ ತನ್ನ ಮಲಗುವ ಮನೆಯಲ್ಲಿಯೆ ಕುಳಿತುಕೊಂಡು ಓದುತ್ತಿದ್ದ. ರವಿವಾರ ದಿವಸ ಹೇಮಾ ಹೊರಗಿನಿಂದ ಕೂಗಿದಳು " ಗುಣೇಂದ್ರಣ್ಣಾ, ಒಳಗೆ ಬರಲೋ ? "

" ಬಾ. "

ಹೇಮಾ ಒಳಗೆ ಹೋಗಿ " ನೀನು ಯಾವಾಗಲೂ ಈ ಮಲಗುವ ಮನೆ ಯಲ್ಲಿಯೆ ಕುಳಿತುಕೊಂಡು ಏಕೆ ಓದುತ್ತಿರುವೆ ? " ಎಂದಳು.

" ಆದರಲ್ಲೇನು ತೊಂದರೆ ? ಇಲ್ಲಿ ಕುಳಿತೋದಿದರೆ ವಿದ್ಯೆ ಕಡಿಮೆ ಬರುವು ದೇನು ? "

" ಓದುವ ರೂಮಿನಲ್ಲಿ ಓದಲು ಕುಳಿತರೇನು ತಪ್ಪು ? "

" ತಪ್ಪೇನೂ ಇಲ್ಲ. ಅಲ್ಲಿ ಓದಿದುದನ್ನು ಇಲ್ಲಿ ಕುಳಿತು ಗಟ್ಟಿ ಮಾಡು ತ್ತಿದ್ದೆನೆ. "

ಹೇಮಾ ಸ್ವಲ್ಪ ನಕ್ಕಳು. ಅವಳಿಗೆ ಮಾತಿನ ಅರ್ಥವಾಗದ್ದರಿಂದ " ಯಾವ ಮಾತಿಗೂ ನೀನು ನೇರವಾಗಿ ಉತ್ತರವನ್ನೇ ಕೊಡವುದಿಲ್ಲ." ಎಂದಳು.

ಗುಣೇಂದ್ರ ನಸುನಗಲಾರಂಭಿಸಿದ. ಯಾವ ಉತ್ತರವನ್ನೂ ಕೊಡಲಿಲ್ಲ.

ಹೇಮಾ. " ನನಗೆಲ್ಲಾ ಗೊತ್ತು. ನಾನು ಆ ರೂಮಿನಲ್ಲಿರುತ್ತೇನೆ. ಅದ ಕ್ಕಾಗಿಯೇ ನಿನಲ್ಲಿ ಓದುವುದಿಲ್ಲ. ನಿನಗೆ ನನ್ನನ್ನು ಕಂಡರೆ ನಾಚಿಕೆಯಾಗುತ್ತದೆ. ನಾನು ಮಾತ್ರ ನಿನ್ನನ್ನು ಕಂಡರೆ ಎಷ್ಟೂ ನಾಚುವುದಿಲ್ಲ. " ಎಂದಳು.

" ಏಕೆ ನಾಚುವುದಿಲ್ಲ. ನಾಚಬೇಕು. "

ಹೇಮಾ ಮುಂದೆ ಬಿದ್ದಿರುವ ಹೆಳಲನ್ನು ಹಿಂದುಗಡೆ ಎಸೆದು " ನಿನ್ನನ್ನು ಕಂಡರೆ ನಾನೇಕೆ ನಾಚಬೇಕು ? ನೀನು ಪರಕೀಯನೇನು ? ಹೀಗಾನದು,

ಅಣ್ಣಾ, ನಡೆ ಆ ರೂಮಿಗೆ " ಎನ್ನುತ್ತ ಅವನ ಪುಸ್ತಕವನ್ನು ತೆಗೆದುಕೊಂಡು ಹೊರಟು ಹೋದಳು.

ಗುಣೇಂದ್ರ ಒಂದು ದಿನ ಹೇಮಾಗೆ ದಿನಾಲು ತೊಟ್ಟುಕೊಳ್ಳುವುದಕ್ಕೆ ಹಾರ, ಬಂಗಾರದ ಬಳಿ, ಬಳೆಗಳನ್ನು ತೆಗೆದುಕೊಂಡು ಬಂದ. ಅವನ್ನು ಸುಲೋಚನಾ ನೋಡಿ " ಏನು ಮಗೂ, ಇವನ್ನೆಲ್ಲಾ ಏಕೆ ತಂದೆ ? " ಎಂದಳು.

" ಇಷ್ಟರಿಂದಲೆ ಏನಾಗುವುದಮ್ಮಾ, ಇನ್ನೂ ಬಹಳಬೇಕು. ಬರಿಗೈಯಿಂದ ಇರಬೇಕೆನು ಹುಡುಗಿ ! "

ಸುಲೋಚನೆಯು ಮುಂದೇನೂ ಆಡಲಿಲ್ಲ. ಆದರೆ ಆಕೆಯ ಮನಸ್ಸು ಮಾತ್ರ ಉದ್ವಿಗ್ನವಾಯಿತು. ಇಷ್ಟು ಬೇಗ ಹೇಗೆ ಅವರು ಇಬ್ಬರೂ ಇನ್ನೊಬ್ಬರನ್ನು ತನ್ನವರನ್ನಾಗಿ ಮಾಡಿಕೊಂಡರೆಂಬುದನ್ನು ಅವಳು ಯೋಚಿಸಲಾರಂಭಿಸಿದಳು. ಒಂದು ದಿವಸ ಅವಳು ಗುಣೇಂದ್ರನನ್ನು ಕರೆದು " ಮುಂದಿನ ಮಾರ್ಗಶೀರ್ಷದಲ್ಲಿ ಹೇಮಾನ ಮದಿವೆಯನ್ನು ಮಾಡಲೇಬೇಕು. ಒಂದಿದ್ದರೆ ಇತ್ತು ಇಲ್ಲದಿದ್ದರೆ ಇಲ್ಲ. ಆದ ಹಾಗೆ ಮಾಡಿಬಿಡಬೇಕು. ಹುಡುಗಿ ದೊಡ್ಡವಳಾಗಿದ್ದಾಳೆ" ಎಂದು ಹೇಳಿದಳು.

" ಇದಕ್ಕೋಸ್ಕರ ಚಿಂತೆ ಮಾಡಬೇಡಮ್ಮಾ. ವರ ಚೆನ್ನಾಗಿರಬೇಕಲ್ಲವೆ ? ಒಳ್ಳೆ ವರ ಹುಡುಕಬೇಕು, ಸಿಕ್ಕಸಿಕ್ಕವರೊಡನೆ ಕಟ್ಟಿ ಬಾವಿಯಲ್ಲಿ ಎಸೆಯಲಾದೀತೆ?'

" ಒಳ್ಳೇದು ಕೆಟ್ಟದು ಏನು ? ಆಕೆಯ ಭಾಗ್ಯ. ನಾವು ಮಾಡುವುದನ್ನು ಮಾಡಲೇ ಬೇಕು ಆನಂತರದ ಮಾತು ಪರಮಾತ್ಮನ ಕೈಯೊಳಗಿನದು. "

" ಅದೂ ಸರಿಯೆ " ಎನ್ನುತ್ತ ಗುಣೇಂದ್ರ ಹೊರಟು ಹೋದ. ಅವನ ಕಣ್ಣೆದುರು ಕಪ್ಪು ನೆರಳೊಂದು ಕವಿದಂತಾಯಿತು. ಅದನ್ನು ಸುಲೋಚನೆಯು ನೋಡಿಳು. ಒಂದು ದೀರ್ಘವಾದ ಉಸಿರೆಳೆದು ಕೆಲಸಕ್ಕೆ ಹೊರಟುಹೋದಳು. ಮನದಲ್ಲಿಯೆ ಯೋಚಿಸತೊಡಗಿದಳು. " ಇದು ಇನ್ನು ನೆಟ್ಟಗಾಗದು. ಎಷ್ಟು ಬೇಗ ಸಾಧ್ಯವೊ ಅಷ್ಟು ಬೇಗ ಹೇಮಾನ ಮದುವೆ ಮಾಡಿ ಬಿಡಬೇಕು. "

ಅದೆಷ್ಟೊ ದಿವಸಗಳಾದ ಮೇಲೆ ಹೇಮಾ ಗುಣೇಂದ್ರನ ರೂಮಿಗೆ ಬಂದು " ಇನ್ನೂ ಮಲಗಿಕೊಂಡಿರುವೆಯಾ ? ಬಟ್ಟೆ ಹಾಕಿಕೊಂಡಿರುವೆಯಾ ? ಬರುವುದಿಲ್ಲವೆ? ಏಳು ಬೇಗ " ಎಂದಳು.

ಗುಣೇಂದ್ರ ಹಾಸಿಗೆಯ ಮೇಲೆ ಮಲಗಿಕೊಂಡೇ ಸುಮ್ಮಗೆ ಹೇಮಾನನ್ನು ನೋಡುತ್ತಿದ್ದ. ಹೇಮಾ ಕಪಾಟಿನ ಕಡೆಗೆ ಹೋಗಿ ಅದರ ಬಾಗಿಲನ್ನು ತೆರೆದಳು, ಹಿಡಿತುಂಬ ನೋಟು, ರೂಪಾಯಿಗಳನ್ನು ತೆಗೆದುಕೊಂಡು ಸೆರಗಿನಲ್ಲಿಟ್ಟುಕೊಂಡಳು. ಪುನಃ ಕಪಾಟಿಗೆ ಬೀಗ ಹಾಕಿ ಗುಣೇಂದ್ರನ ಬಳಿ ಬಂದು " ಗುಣೇಂದ್ರಣ್ಣಾ, ಕಾಲಿಗೆ ಬೀಳುವೆ, ತಡಬೇಡ, ಏಳು, ಅಂಗಡಿ ಬಂದಾದಾವು " ಎಂದಳು.

ಆಕೆಯ ಪೋಷಾಕು ನೋಡಿ ಗುಣೇಂದ್ರ ಸ್ವಲ್ಪ ತಿಳಿದುಕೊಂಡಿದ್ದ. ಆದರೂ ಕೇಳಿದ " ಎಲ್ಲಿಗೆ ಹೋಗಬೇಕು ? "

" ಓಹೋ, ಸರಿ, ಒಂದು ಗಂಟೆಯ ಹಿಂದೆ ಗಾಡೀ ತರುವುದಕ್ಕೆ ಹೇಳಿದ್ದೀಯಾ ಮತ್ತೆ ಈವಾಗ ಕೇಳುತ್ತಿದ್ದೀಯಾ ಎಲ್ಲಿಗೆ ಹೋಗಬೇಕೆಂದು ! "

" ಹೌದು, ಗಾಡಿಯವನಿಗೆ ಗೊತ್ತಿರಬಹುದು ಎಲ್ಲಿಗೆ ಹೋಗಬೇಕೆನ್ನುವುದು. ನಾನು ಗಾಡಿಯವನಲ್ಲ, ನನಗೆ ಹೇಗೆ ಗೊತ್ತಾಗಬೇಕು. "

" ನೀನೇಕೆ ಗಾಡಿಯವನಾಗುವೆ ಅಣ್ಣಾ ? ನಡೆ ಬೇಗ, ಹೊತ್ತಾಗುವುದು " ಎಂದು ನಗುತ್ತ ನುಡಿದಳು ಹೇಮಾ.

" ಯಾವ ಅಂಗಡಿಗೆ ? "

", ಪುಸ್ತಕಗಳ ಅಂಗಡಿಗೆ. ನಿನಗೆ ಮಾನದಾ ಹೇಳಿರಲಿಲ್ಲವೆ ? ನಾನು ಅವಳಿಂದ ಹೇಳಿ ಕಳುಹಿಸಿದ್ದೆ. ಒಳ್ಳೊಳ್ಳೆ ಪುಸ್ತುಕಗಳು ಬಂದಿವೆಯಂತೆ. ನಾನೊಂದು ಲಿಸ್ಟು ತಯಾರು ಮಾಡಿಟ್ಟುಕೊಂಡಿದ್ದೇನೆ. "

ಆಕೆಯ ಕೈಯಲ್ಲಿದ್ದ ಕಾಗದವನ್ನು ನೋಡಿ ಆ ಕಡೆಗೆ ಕೈನೀಡಿ "ನೋಡೋಣ. ಲಿಸ್ಟು " ಎಂದ ಗುಣೇಂದ್ರ.

" ಇಲ್ಲ. ನೀನು ಲಿಸ್ಟು ನೋಡಿದರೆ ಪುಸ್ತಕ ಕೊಳ್ಳಗೊಡುವುದಿಲ್ಲ. "

" ಹಾಗೆಯೆ ಬಚ್ಚಿ ಖರೀದಿ ಮಾಡಿದರೆ ಓದಲಿಕ್ಕೂ ಕೊಡುವುದಿಲ್ಲ "

ಹೇಮಾ ಸ್ವಲ್ಪ ಹೊತ್ತು ಸುಮ್ಮಗಿದ್ದು " ಸರಿ, ಗಾಡಿಯಲ್ಲಿ ಕುಳಿತ ಮೇಲೆ ತೋರಿಸುವೆ " ಎಂದಳು.

ಸಾಯಂಕಾಲ ಇಬ್ಬರೂ ಪುಸ್ತಕ ಖರೀದಿ ಮಾಡಿಕೊಂಡು ಹಿಂತಿರುಗಿದರು ಸುಲೋಚನೆಯು ನೋಡಿ " ಇಷ್ಟೆಲ್ಲ ಪುಸ್ತುಕಗಳನ್ನೇನು ಮಾಡುವಿಯೋ ? " ಎಂದಳು.

ಗುಣೇಂದ್ರ "ಗೊತ್ತಿಲ್ಲಮ್ಮಾ. ಇವೆಲ್ಲಾ ಹೇಮಾನ ಪುಸ್ತಕಗಳು ಆದೆಂಥೆಂಥ ಪುಸ್ತುಕಗನ್ನೊ ಕೊಂಡುಕೊಂಡು ಹಣ ಹಾಳುಮಾಡಿ ಬಂದಿದ್ದಾಳೆ " ಎಂದ.

" ನೀನು ಕೊಟ್ಟೆಯೇಕೆ ? "

" ನಾನೇಕೆ ಕೊಡಲಿ ? ಬೀಗದಕ್ಕೆ ಆಕೆಯ ಹತ್ತಿರವೇ ಇರುತ್ತದೆ. ಆಕೆಯೆ ರೂಪಾಯಿ ತೆಗೆದುಕೊಂಡಳು, ಗಾಡೀ ಹೇಳಿಕಳುಹಿದಳು, ಸ್ವತಃ ಹೋಗಿ ಖರೀದಿ ಮಾಡಿಕೊಂಡು ಬಂದಳು. ನಾನು ಸುಮ್ಮಗೆ ಜೊತೆಗೆ ಹೋಗಿದ್ದೆ. "

ಗುಣೇಂದ್ರ ಬಹಳಷ್ಟು ಪುಸ್ತುಕಗಳನ್ನು ನಂದಾನಕೂಡ ಮಾನದಾಗೆ ಕಳುಹಿಸಿ ಕೊಟ್ಟ. ಸುಲೋಚನಾ ಗುಣೇಂದ್ರನಿಗೆ ಹೇಳಿದಳು " ಮಗೂ, ಇಷ್ಟು ತಲೆಗೇರಿ

ಸುವುದು ತರವಲ್ಲ. ಯಾರ ಕೈ ಹಿಡಿಯುವಳೊ, ಎಲ್ಲಿಗೆ ಹೋಗುವಳೊ ಆ ಮೇಲೆ ತೊಂದರೆಗಿಟ್ಟೀತು."

ಗುಣೇಂದ್ರ ಮೇಲೆ ಹೋಗಿ ಲೈಬ್ರಿಯ ರೂಮಿನಲ್ಲಿ ಹೊಕ್ಕ. ಹೇಮಾ ದೀಪದ ಬೆಳಕಿನಲ್ಲಿ ಪುಸ್ತಕಗಳಿಗೆ ನಂಬರಿನ ಚೀಟಿಗಳನ್ನು ಅಂಟಿಸುತ್ತಿದ್ದಳು. "ನಿನ್ನನ್ನು ಇಷ್ಟು ತಲೆಗೇರಿಸುವುದು ತರವಲ್ಲವೆಂದೂ, ಯಾರ ಕೈ ಹಿಡಿಯುವೆಯೊ ಎಲ್ಲಿಗೆ ಹೋಗುವಿಯೊ; ಆ ಮೇಲೆ ತೊಂದರೆಗಿಟ್ಟೀತೆಂದೂ ಅಮ್ಮ ಹೇಳಿದಳು!" ಎಂದ ಗುಣೇಂದ್ರ.

ಹೇಮಾ ಮುಖ ತಿರುಗಿಸಿ ಕೂಡಲೆ ಕ್ರೋಧದಿಂದ ನುಡಿದಳು "ಕಷ್ಟವನ್ನೇಕೆ ಪಡೆಯುವೆ ? ತೊಂದರೆಗೇಕೆ ಈಡಾಗುವೆ ? ಬಡವರ, ದುಃಖಿಗಳ ಮನೆಗೆ ಕೊಟ್ಟರೆ ಮರುದಿನವೇ ಓಡಿಬರುವೆ."

ಗುಣೇಂದ್ರ ನಕ್ಕು "ಒಳ್ಳೇದು" ಎಂದ.

ಹೇಮಾ ಹೆಚ್ಚು ಮಾತನಾಡಲಿಲ್ಲ. ಕೆಲಸದಲ್ಲಿ ತೊಡಗಿದಳು. ಗುಂಣೇಂದ್ರ ಸ್ವಲ್ಪ ಹೊತ್ತು ಆಕೆಯ ಕಡೆಗೆ ಸುಮ್ಮನೆ ನೋಡುತ್ತ ನಿಂತ. ಬರುತ್ತಿದ್ದ ಉಸಿರನ್ನು ತಡೆದು ಬಳಿಕ ತನ್ನ ರೂಮಿಗೆ ಹೋದ.

ದುರ್ಗಾಪೂಜೆಯು ಮುಗಿಯಿತು. ದಸರೆಯ ದಿನ ಗಾಡಿಯಲ್ಲಿ ಕುಳಿತು ಹೇಮಾ ದೇವಮೂರ್ತಿ ಜಲವಿಸರ್ಜನೆಯನ್ನು ನೋಡಹೋದಳು. ತಿರುಗಿಬಂದು ತಾಯಿಗೆ ನಮಸ್ಕರಿಸಿ ಮೇಲಕ್ಕೆ ಬಂದಳು. ಮೇಲೆ ಬೆಳದಿಂಗಳಲ್ಲಿ ತೆರೆದ ಹವೆಯಲ್ಲಿ ಗುಣೇಂದ್ರ ಒಬ್ಬನೆ ಎಡೆಯಾಡುತ್ತಿದ್ದ. ಹೇಮಾ ಅವನ ಬಳಿ ಸಾರಿ ಅವನ ಪಾದ ಕ್ಕೆರಗಿದಳು. ಅವನ ಪಾದಧೂಳಿಯನ್ನು ಮಸ್ತಕದಲ್ಲಿರಿಸಿಕೊಂಡು ಎದ್ದು ನಿಂತಳು. ಗುಣೇಂದ್ರ ಮಾತನಾಡಲಿಲ್ಲ. ಒಂದೇಸಮನೆ ಆಕೆಯ ಮುಖದ ಕಡೆ ನೋಡ ಲಾರಂಭಿಸಿದ. ಇದರಿಂದ ಹೇಮಾಗೆ ಸ್ವಲ್ಪ ನಾಚಿಕೆಯಾದಂತಾಯಿತು. ಆಗಲೇ ಕೇಳಿದಳು "ನನಗೆ ಆಶೀರ್ವದಿಸಲಿಲ್ಲ ಗುಣೇಂದ್ರಣ್ಣಾ ?"

ಗುಣೇಂದ್ರನ ತಂದ್ರಾವಸ್ಥೆಯು ಮಾಯವಾಯಿತು. ಅವನು ಬೇಗನೆ ಎಂದ "ಕೊಡಲಿಲ್ಲವೇಕೆ ?"

"ಎಲ್ಲಿ ಕೊಟ್ಟೆ ?"

"ಮನದಲ್ಲಿಯೆ ಕೊಟ್ಟೆ."

ಹೇಮಾ ನಗುವನ್ನು ತಡೆದುಕೊಂಡು "ಏನೆಂದು ಆಶೀರ್ವದಿಸಿದೆ ಹೇಳು!" ಎಂದಳು.

ಗುಣೇಂದ್ರ ತೊಂದರೆಗೀಡಾದ. ಕೊನೆಗೆ ಗಂಭೀರನಾಗಿ "ಆಶೀರ್ವಾದವನ್ನು ಕೊಟ್ಟಮೇಲೆ ಹೇಳಬಾರದು. ಹೇಳಿದರೆ ಅದರ ಫಲ ಹೊರಟು ಹೋಗುತ್ತದೆ" ಎಂದ.

"ಒಳ್ಳೇದು ನೀನು ತಾಯಿಗೆ ವಂದಿಸಿದೆಯಾ?"

"ದಿನಾಲು ವಂದಿಸುತ್ತೇನಲ್ಲ!"

"ಇಲ್ಲಿಲ್ಲ. ಇವೊತ್ತು ದಸರೆ. ದಸರೆಯ ದಿನ ವಂದಿಸಲಾರೆಯಾ? ಬೇಗ ಹೋಗಿ ವಂದಿಸಿಬಾ. ಇಲ್ಲದೆ ಹೋದರೆ ಆಕೆಗೆ ದುಃಖವಾಗುತ್ತದೆ."

ಗುಣೇಂದ್ರ ಕೆಳಕ್ಕಿಳಿದ.

ಸುಮಾರು ಅರ್ಧ ಕಾರ್ತಿಕಮಾಸವು ಕಳೆದಿದ್ದಿತು. ಒಂದು ದಿನ ಹೇಮಾ ಗುಣೇಂದ್ರನ ರೂಮಿನಲ್ಲಿ ಹೊಕ್ಕು "ನಿಮಗೇನು ಮಾತನಾಡಲಿಕ್ಕೆ ಬೇರೆ ವಿಷಯವೆ ಇಲ್ಲವೇನು? ನಾನೇನು ನಿಮಗೆ ಅಂತಹ ಕೆಟ್ಟದನ್ನು ಬಗೆದಿರುವೆ?" ಎಂದು ಅಳತೊಡಗಿದಳು.

ಗುಣೇಂದ್ರನಿಗೆ ಯಾವುದೂ ತಿಳಿಯದಾಯಿತು. ಅವನು ಕೇಳಿದ "ಏನಾಯಿತು ಹೇಮಾ?"

ಅವಳು ಅಳುತ್ತಲೆ "ಏನೂ ಗೊತ್ತಿಲ್ಲದವರಂತೆ ಮಾತಾಡುತ್ತಿರುವೆಯಾ, ಕೇಳುತ್ತಿರುವೆಯಾ ಏನಾಯಿತು ಹೇಮಾ! ಎಂದು. ಶಾಂತಿಪುರಕ್ಕೊ ಎಲ್ಲಿಗೊ— ಎಲ್ಲವೂ ನಿಶ್ಚಯವಾಗಿ ಹೋಗಿದೆಯೆಂದು ಅಮ್ಮ ಹೇಳುತ್ತಿದ್ದಳು. ನಾನು ಮದುವೆ ಮಾಡಿಕೊಳ್ಳಲು ಒಪ್ಪದಿದ್ದರೆ ಏನು ನೀವು ನನ್ನ ಕೈಕಾಲು ಕಟ್ಟಿ ಬಲಾತ್ಕಾರದಿಂದ ಮಾಡುವಿರಾ?"

ಗುಣೇಂದ್ರನಿಗೆ ಈವಾಗ ತಿಳಿಯಿತು. ಅವನು ನಗುತ್ತ "ಸರಿ, ಈ ಮಾತೊ? ನೀನು ದೊಡ್ಡವಳಾಗಿರುವೆ. ನಿನ್ನ ಮದುವೆ ಮಾಡಬಾರದೆ?" ಎಂದ.

"ಮಾಡಬಾರದು."

"ಮಾಡಬಾರದು? ಮದುವೆ ಮಾಡದಿದ್ದರೆ ಜಾತಿಯವರು ಕುಲದಿಂದ ಹೊರಗಿಡುವರು."

"ನೀನೂ ಮದಿವೆಯಾಗಿಲ್ಲ. ನಿನ್ನನ್ನೇಕೆ ಹೊರಗಿಡುವುದಿಲ್ಲ?"

"ನಮ್ಮ ಮಾತೇ ಬೇರೆ. ನಾವು ಬ್ರಹ್ಮಸಮಾಜಕ್ಕೆ ಸೇರಿದವರು. ಆದರೆ ನಿಮ್ಮ ಜಾತಿಯಲ್ಲಿ ಸಮಯಕ್ಕೆ ಸರಿಯಾಗಿ ಹುಡುಗಿಯ ಮದಿವೆಮಾಡದಿದ್ದರೆ ಬಹಿಷ್ಕಾರ ಹಾಕುತ್ತಾರೆ. ಆದುದರಿಂದ—"

"ನಿಮ್ಮ ಸಮಾಜವೆ ಒಳ್ಳೆಯದು. ನಿಮ್ಮ ಸಮಾಜದಲ್ಲಿ ಮನುಷ್ಯತ್ವವಿದೆ. ಆದುದರಿಂದಲೆ ಜನರು ಹೀಗೆ ಕೈಕಾಲು ಕಟ್ಟಿ ನಿಮ್ಮವರು ಕೊಲ್ಲುವುದಿಲ್ಲ. ನಾನು

ಈ ಮನೆಯನ್ನು ಬಿಟ್ಟು ಹೋಗುವುದೇ ಇಲ್ಲ. ನೀವು ಬೇಕಾದಷ್ಟು ಒಳಸಂಚು ಯುಕ್ತಿ-ಪ್ರಯುಕ್ತಿಗಳನ್ನು ಮಾಡಿರಿ" ಎಂದು ಕಣ್ಣು ಉಜ್ಜಿಕೊಳ್ಳುತ್ತ ನುಡಿದಳು.

ಗುಣೇಂದ್ರ ಆಕೆಯನ್ನು ಸಮಾಧಾನಮಾಡುವುದಕ್ಕಾಗಿ ಬಹಳ ಸ್ನೇಹಪೂರಿತ ದನಿಯಿಂದ "ಅವರ ಮನೆಯೂ ಬಹಳ ದೊಡ್ಡದು! ಅವರೂ ನೋಡಲಿಕ್ಕೆ ಒಳ್ಳೆಯವರಿದ್ದಾರೆ. ವಿದ್ವಾಂಸರಿದ್ದಾರೆ, ಬುದ್ಧಿವಂತರಿದ್ದಾರೆ. ದೊಡ್ಡಮನುಷ್ಯರಿದ್ದಾರೆ. ಅಲ್ಲಿ ನಿನಗಾವ ತೊಂದರೆಯೂ ಆಗಲಿಕ್ಕಿಲ್ಲ."

ಹೇಮಾಗೆ ಎಳ್ಳಷ್ಟು ಸಮಾಧಾನವಾಗಲಿಲ್ಲ. ಜೋರಿನಿಂದಲೆ ಮುಂಡೆ ಎದೆಯ ಮೇಲಾಡುತ್ತಿದ್ದ ಕೇಶರಾಶಿಯನ್ನು ಹಿಂದೆಸೆದು "ಆಗದು, ಅಲ್ಲಿಗೆ ನನ್ನನ್ನು ಖಂಡಿತವಾಗಿಯೂ ಕೊಡಕೂಡದು. ನಾನು ನಿಮಗೆ ಹೊರೆ ಆಗಿದ್ದರೆ, ನನಗೆ ಊಟಕ್ಕೆ ಹಾಕಬೇಡಿ. ಸೀರೆ-ಕುಪ್ಪಸ ಕೊಡಬೇಡಿ ನಾನು ಊಟಮಾಡದೆ ಈ ಲೈಬ್ರರಿರೂಮಿನಲ್ಲಿ ಬಿದ್ದುಕೊಂಡಿರುವೆ. ಏನನ್ನೂ ಬೇಡುವುದಿಲ್ಲ." ಎಂದಳು.

ಗುಣೇಂದ್ರ ನಗಲು ಯತ್ನಿಸುತ್ತ "ಅಲ್ಲಿಯೂ ನಿನಗೆ ಲೈಬ್ರರಿ ರೂಮು ಸಿಕ್ಕುವುದು. ಸಿಕ್ಕದೆ-ಹೋದರೆ ಈ ಲೈಬ್ರರಿಯನ್ನೆ ಅಲ್ಲಿಗೆ ಒಯ್ದು ಬಿಡು" ಎಂದ.

ಹೇಮಾ ಅವನ ಮಾತನ್ನು ಕೇಳಲಿಲ್ಲ ಕೂಡ. ಅಳುತ್ತ ಅಳುತ್ತ ಎಂದಳು. "ನೀನೇನೂ ಮಾಡಬೇಕಾಗಿಲ್ಲ, ಗುಣೇಂದ್ರಣ್ಣಾ, ಏನು ಮಾಡಬೇಕಾಗಿಲ್ಲ. ಇದೇ ಮಾರ್ಗಶೀರ್ಷದಲ್ಲಿ ಅಲ್ಲವೆ? ಒಂದು ತಿಂಗಳ ಬಳಿಕಲ್ಲವೆ? ನಿನ್ನ ಪಾದಕ್ಕೆರಗುವೆ ಗುಣೇಂದ್ರಣ್ಣಾ, ಈ ಸಂಬಂಧವನ್ನು ಮುರಿದು ಬಿಡು."

ಆಕೆಯ ಅಳುವನ್ನು ನೋಡಿ ಗುಣೇಂದ್ರನ ನಯನಗಳಲ್ಲೂ ನೀರಾಡತೊಡಗಿತು. ಅವನು ಅವನ್ನು ಪ್ರಯತ್ನಪೂರ್ವಕವಾಗಿ ತಡೆದು "ಇದು ಹೇಗಾಗುವುದು. ಹೇಮಾ? ಮುರಿಯಲಾಗದು. ಎಲ್ಲ ಮಾತು ನಿಶ್ಚಯವಾಗಿಬಿಟ್ಟಿದೆ." ಎಂದ.

"ಮಾತುಕತೆಯೇನಾಗಿದೆ! ನೀನು ಸಂಬಂಧವನ್ನು ಗಟ್ಟಿ ಮಾಡಿರುವೆ. ನಿನ್ನಿಷ್ಟ ಬಂದರೆ ಮುರಿದು ಬಿಡಬಲ್ಲೆ. ನಿನಗೆ ಕೈಮುಗಿವೆ ಗುಣೇಂದ್ರಣ್ಣಾ, ನನ್ನ ಈ ಮಾತನ್ನು ಅಷ್ಟು ನಡೆಯಿಸಿಕೊಡು?"

ಸುಲೋಚನೆಗೆ ಸ್ವಲ್ಪ ಸಂಶಯ ಬಂದಿದ್ದಿತು. ಅವಳು ಆಕೆಯ ಹಿಂದಿಂದೇ ಮೇಲಕ್ಕೆ ಬಂದಿದ್ದಳು. ಈಗ ಕೋಣೆಯಲ್ಲಿ ಹೊಕ್ಕು ಕೋಪದಿಂದ "ಇದೇನು ಹೇಮಾ? ಹುಚ್ಚಿಯಂತೆ ಏನೇನು ಒಟಗುತ್ತಿದ್ದಿಯೆ? ಸಂಬಂಧ ಗಟ್ಟಿಯಾದ ಬಳಿಕ ಎಲ್ಲಾದರೂ ಮುರಿಯಲಿಕ್ಕಾದೀತೆ? ನಿನಗಿಂಥ ಅಣ್ಣಾ ಸಿಕ್ಕು, ನಿನ್ನ ಭಾಗ್ಯ ಚೆನ್ನಾಗಿದೆ. ಇಂಥ ಒಳ್ಳೆಮನೆ ಸಿಕ್ಕಿದೆ, ಹೇಳುತ್ತಿಯೆ ಮುರಿದು ಬಿಡು ಅಂತಾ ಹಿಂದೂ ಹುಡುಗೆಯಾಗಿ ಕ್ರಿಶ್ಚಿಯನ್ ಹುಡುಗಿಯರಂತೆ ಹೀಗೆಯೆ ಕುಮಾರಿಯಾಗಿರುವೆಯಾ? ನಡೆ, ಕೆಳಗೆ ನಡೆ" ಎಂದಳು.

ಹೇಮಾ ಹೊರಟು ಹೋದಳು. ಸುಲೋಚನಾ ಗುಣೇಂದ್ರನ ಕಡೆಗೆ ನೋಡಿ " ಇದೆಲ್ಲಾ ಹಗಲೂ ರಾತ್ರಿ ಪುಸ್ತಕಗಳನ್ನು ಓದುವುದರ ಫಲ. ಇವತ್ತು ನಾಲ್ಕು ಗಂಟೆ ಕಾದಂಬರಿಯನ್ನು ಓದುವುದರಿಂದಲೆ ಇಂತಹ ಮಾತುಗಳು ಹೊಳೆಯುತ್ತವೆ. ಮಾರ್ಗಶೀರ್ಷದಲ್ಲಿ ಹೇಗಾದರೂ ಮಾಡಿ ಮದಿವೆ ಮಾಡಿಯೆ ಬಿಡಬೇಕು " ಎಂದಳು

ಗುಣೇಂದ್ರ ಸುಮ್ಮನೆ ಕುಳಿತಿದ್ದ. ಸುಲೋಚನಾ ಸ್ವಲ್ಪ ಹೊತ್ತು ನಿಂತಿದ್ದು ಮೆಲ್ಲಗೆ ಹೊರಟು ಹೋದಳು.

ಎರಡು ದಿನಗಳಾದ ಬಳಿಕ ಗುಣೇಂದ್ರ ಕಚೇರಿಯಿಂದ ಬಂದು ನೇರವಾಗಿ ಯಾವುದೋ ಪುಸ್ತಕಕ್ಕಾಗಿ ಲೈಬ್ರರಿಯನ್ನು ಪ್ರವೇಶಿಸುತ್ತಿದ್ದ, ಹೇಮಾ ಒಳಗಿಂದ " ಗುಣೇಂದ್ರಣ್ಣಾ, ಒಳಗೆ ಬರಬೇಡ. ಊಟ ಮಾಡುತ್ತಿದ್ದೇನೆ, " ಎಂದಳು.

ಗುಣೇಂದ್ರ ಅಲ್ಲಿಯೆ ನಿಂತು ಬಿಟ್ಟ. " ಊಟ ಮಾಡಲ್ಲ ನೀನು. ನಾನು ಒಳಗೆ ಬರುವುದರಿಂದಲೆ ನಿನ್ನ ಜಾತಿ ಹೊರಟು ಹೋಗುತ್ತದೇನು ? " ಎಂದ.

" ಇಡೀ ರೂಮಿನಲ್ಲಿ ಕಾರ್ಪೆಟ್ ಹಾಸಿಯಲ್ಲಾ "

" ನಿನ್ನ ದಾಸಿ ಮಾನದಾ ಬಂದರೆ ನಿನ್ನ ಜಾತಿ ಹೋಗುವುದಿಲ್ಲ. ಇನ್ನ ಊಟ ಕೆಡುವುದಿಲ್ಲ, ನಾನು ಅವಳಿಗಿಂತಲೂ ಕೀಳನೇನು ? "

ಅವನು ಅಪ್ರತಿಭಳಾಗಿ ನಗುತ್ತ " ಸರಿ; ಬಾ, ನನ್ನ ಊಟವಾಗಿ ಹೋಯಿತು" ಎಂದು ತನ್ನ ತಟ್ಟೆಯನ್ನು ಟೇಬಲ್ಲಿನ ಕೆಳಗೆ ಸರಿಸಿದಳು.

" ಇಲ್ಲಿಲ್ಲ, ನೀನು ಉಣ್ಣು. ನಾನು ಬಟ್ಟೆ ಬಿಚ್ಚಿಹಾಕಿ ಬರುತ್ತೇನೆ " ಎನ್ನುತ್ತ ಗುಣೇಂದ್ರ ಬೇಗ ಬೇಗ ಹೊರಟು ಹೋದ. ಅವನ ಹೃದಯದಲ್ಲಿ ಬೆಂಕಿಯು ಹೊತ್ತಿ ಹೋಯಿತು.

ಮರುದಿನ ಗುಣೇಂದ್ರ ಹತ್ತುಗಂಟೆಗೆ ಊಟಮಾಡಿ ಎದ್ದ ಕೂಡಲೆ ಹೇಮಾ ಎಲ್ಲಿಂದಲೊ ಓಡಿಬಂದು ಗುಣೇಂದ್ರನ ತಟ್ಟೆಯಲ್ಲಿಯೆ ಉಣ್ಣುವುದಕ್ಕೆ ಕುಳಿತಳು. ಅಡುಗೆಯವನಿಗೆ " ಮಹಾರಾಜ, ಇದರಲ್ಲೇ ನನಗೆ ಬಡಿಸು " ಎಂದಳು.

ಅಡುಗೆಯವನಿಗೆ ಪೆಚ್ಚು ಪೆಚ್ಚಾಯಿತು. ಅವನೆಂದ " ಅದರಲ್ಲಿ ಬಾಬೂಜಿಯವರು ಉಂಡಿದ್ದಾರೆ "

ಸುಲೋಚನಾ ಮಗ್ಗಲು ರೂಮಿನಲ್ಲಿಯೆ ಕುಳಿತಿದ್ದಳು. ಈ ಮಾತುಗಳನ್ನು ಕೇಳಿ ಎದ್ದು ಬಂದು " ಇದನ್ನೇನು ಮಾಡುತ್ತಿರುವೆ ಹೇಮಾ ? ಇದು ಗುಣೀಯ ಎಂಜಲದ ತಟ್ಟೆ. ಹೋಗು, ಸೀರೆಬಿಚ್ಚಿ ಹಾಕಿ, ಗಂಗಾಜಲವನ್ನು ಸಿಂಪಡಿಸಿ ಕೊಂಡು ಬಾ " ಎಂದಳು.

ಗುಣೇಂದ್ರನ ತಟ್ಟೆಯಲ್ಲಿದ್ದ ಒಂದು ತುತ್ತನ್ನು ಬಾಯಲ್ಲಿಟ್ಟುಕೊಳ್ಳುತ್ತ ಹೇಮಾ "ಮಹಾರಾಜ, ನೀನು ಬಡಿಸುವುದಿಲ್ಲೇಕೆ ? ಗುಣೇಂದ್ರಣ್ಣ ಎಂಜಲ ತಟ್ಟೆಯಲ್ಲಿ ಉಣ್ಣುವ ಯೋಗ್ಯತೆ ಪ್ರಪಂಚದಲ್ಲಿ ಎಷ್ಟು ಜನರಿಗಿದೆ ? ಭಾಗ್ಯಬೇಕು, ಅಂದರೆ ಉಣ್ಣಲು ಸಿಕ್ಕುವುದು !" ಎಂದಳು.

ಸುಲೋಚನೆಯು ಬೆಪ್ಪಾಗಿ ಹುಡುಗಿಯ ಮುಖದ ಕಡೆಗೆ ನೋಡುತ್ತ ನಿಂತು ಬಿಟ್ಟಳು. ಮಹಾರಾಜನು (ಅಡಿಗೆಯವನು) ಅನ್ನ-ಹುಳಿ, ಕಾಯಿಪಲ್ಲೆ ಬಡಿಸಿ ಹೋದ

ಗುಣೇಂದ್ರ ಅಂಗಳದಲ್ಲಿ ಒಂದುಕಡೆ ಕುಳಿತು ಕೈಬಾಯಿ ತೊಳೆದುಕೊಳ್ಳುತ್ತ ಕುಳಿತಿದ್ದ. ಅವನಿಗೆ ಇವೆಲ್ಲ ಮಾತುಗಳು ಕೇಳಿಸಿದುವು. ಸಾಯಂಕಾಲ ಅವನ ಹೇಮಾಗೆ "ನಿನ್ನ ಜಾತಿ ಇವೊತ್ತು ಹೋಯಿತು !" ಎಂದ.

ಹೇಮಾ ಹೊಸ ಪುಸ್ತಕಗಳನ್ನು ಓದುವುದರಲ್ಲಿ ತಲ್ಲೀನಳಾಗಿದ್ದಳು. ಕತ್ತನ್ನೆತ್ತದೆ ಕೇಳಿದಳು "ಯಾರು ಹೇಳಿದರು ನಿನಗೆ ?"

"ಯಾರಾದರೂ ಹೇಳಿದರು. ಹೋಯಿತು ನಿಜ ಅಲ್ಲವೆ ?"

ಹೇಮಾ ಕತ್ತೆತ್ತಿ "ಇಲ್ಲ, ಕದಾಪಿ ಇಲ್ಲ. ನಿನ್ನ ತಟ್ಟೆಯಲ್ಲುಣ್ಣುವುದರಿಂದ ಯಾರ ಜಾತಿಯೂ ಹೋಗುವುದಿಲ್ಲ-ಜಾತಿಯನ್ನು ಮಾಡಿದವರ ಜಾತಿಯೂ ಹೋಗುವುದಿಲ್ಲ." ಎಂದಳು.

ಗುಣೇಂದ್ರ ಪಕ್ಕದಲ್ಲಿದ್ದ ಕುರ್ಚಿಯನ್ನೆಳೆದುಕೊಂಡು ಕುಳಿತು "ನೀನು ಸರಿ ಮಾಡಲಿಲ್ಲ. ತಮ್ಮ ತಮ್ಮ ಜಾತಿಯ ಕಟ್ಟಳೆಯನ್ನು ಮನ್ನಿಸಿ ನಡೆಯುವುದು ವಿಹಿತವಾದುದು. ಮೇಲಾಗಿ ಇದರಿಂದ ಅಮ್ಮನಿಗೆ ದುಃಖವಾಗುವುದು" ಎಂದ.

ಹೇಮಾ ಸ್ವಲ್ಪಹೊತ್ತು ಸುಮ್ಮಗಿದ್ದು ಒಮ್ಮೆಲೆ "ನೀನು ಎಲ್ಲರಿಗಿಂತ ಕೀಳನೊ ನಿಮ್ನ ತರಗತಿಯವನೊ ! ನೀನು ಇದನ್ನೆಲ್ಲ ಸಹಿಸಬಹುದು. ನಾನು ಸಹಿಸಲಾರೆ. ನಿನ್ನ ತಟ್ಟೆಯಲ್ಲಿ ಕುಳಿತುಣ್ಣುವುದರಿಂದ ತಾಯಿಗೆ ದುಃಖವಾಗುವುದು ನಿಜ—ಒಪ್ಪಿದೆ—ಉಣ್ಣದೆ ಇರುವುದರಿಂದ ತಾಯಿಗಿಂತಲೂ ಹಿರಿಯರಾದವರಿಗೆ ಹೆಚ್ಚು ದುಃಖವಾಗುತ್ತದೆ ಒಳ್ಳೇದು, ಈವಾಗ ನೀನು ಹೋಗು—ಈಗ ನನ್ನಿಂದ ಚರ್ಚಿಸಲಿಕ್ಕಾಗುವುದಿಲ್ಲ ಓದುತ್ತೇನೆ ಸ್ವಲ್ಪ.—ಎನ್ನುತ್ತ ಹೇಮಾ ತೆರೆದಿದ್ದ ಪುಸ್ತಕದ ಕಡೆಗೆ ಬಾಗಿ ಓದತೊಡಗಿದಳು.

ಗುಣೇಂದ್ರ ಸ್ವಲ್ಪ ಹೊತ್ತು ಸುಮ್ಮಗೆ ಕುಳಿತುಕೊಂಡಿದ್ದು ಬಳಿಕ ಮೆಲ್ಲಮೆಲ್ಲಗೆ ಎದ್ದು ಹೊರಟುಹೋದ. ಒಮ್ಮಿಂದೊಮ್ಮೆಗೆ ಅವನ ಕಣ್ಣೆದುರಿನಲ್ಲಿದ್ದ ಕಪ್ಪು ಪರದೆಯು ಮಾಯವಾದಂತಾಯಿತು.

೪

ಮಾರ್ಗಶೀರ್ಷದ ಕೊನೆಯಲ್ಲಿ ನವದ್ವೀಪದ ಓರ್ವ ಜಮೀನುದಾರನೊಡನೆ ಹೇಮಾನ ಮದಿವೆಯಾಗಿ ಹೋಯಿತು. ಅವಳು ದೂರದಿಂದ ಗುಣೇಂದ್ರಣ್ಣನಿಗೆ ನಮಸ್ಕಾರಮಾಡಿ ಪತಿಯಮನೆಗೆ ಹೋದಳು. ಅಲ್ಲಿ ಮನೆಯಲ್ಲಿ ಮಾವ, ಅತ್ತೆ, ನಾದಿನಿ ಮೊದಲಾದವರಾರೂ ಇಲ್ಲ. ಆದರೆ ಕೇವಲ ಅಜ್ಜಿಯೊಬ್ಬಳಿದ್ದಳು. ಒಬ್ಬ ಮೈದುನನಿದ್ದ. ಅವನು ಕಲಕತ್ತೆಯಲ್ಲಿ ಕಾಲೇಜಿನಲ್ಲಿ ಓದುತ್ತಿದ್ದ.

ಕಿಶೋರಿಬಾಬುಗಳ ವಯಸ್ಸು ಸುಮಾರು ಮೂವತ್ತಾರು. ಮೊದಲಿನ ಹೆಂಡತಿಯು ತೀರಿದ ಮೇಲೆ ವಯಸ್ಸಾದ ಹುಡುಗಿಯನ್ನು ಹುಡುಕುತ್ತಿದ್ದರು. ಆದುದರಿಂದ ನೋಡದಲೆ ಹೇಮಾನನ್ನು ಮದುವೆಯಾದರು. ಮದುವೆಯಾದಬಳಿಕ ಸುಲೋಚನಾಳನ್ನು ತಮ್ಮಲ್ಲಿಗೆ ಕರೆಯಿಸಿಕೊಳ್ಳುವುದಕ್ಕೆ ಪತ್ರವ್ಯವಹಾರ ನಡೆಯಿಸಿದರು ಮತ್ತು ದುಂಬಾಲಬಿದ್ದರು ಸುಲೋಚನೆಯೂ ಮಗಳ ಮನೆಗೆ ಹೋಗಲು ಒಡಂಬಟ್ಟಳು. ನವದ್ವೀಪದಲ್ಲಿದ್ದು ಪುಣ್ಯಗಳಿಸಬೇಕೆಂದು ಆಕೆಯ ವಿಚಾರವಿದ್ದಿತು.

ಆದರೆ ಹೇಮಾ ಬರೆದುಬಿಟ್ಟಳು—ನೀನು ಇದ್ದ ಮನೆಯಲ್ಲಿಯೆ ಇದ್ದು ಬಿಡು. ಆ ಮನೆಯ ಗಾಳಿಸೋಂಕಿದರೆ ಈ ನವದ್ವೀಪದ ಮನೆಯ ಉದ್ಧಾರವೂ ಆದಂತಾಗುವುದು. ಅಲ್ಲಿದ್ದುಕೊಂಡು ನೀನು ಪುಣ್ಯ ಸಂಚಯಮಾಡಿಕೊಳ್ಳಲಾರೆಯಾದರೆ ವೈಕುಂಠಕ್ಕೆ ಹೋದಮೇಲೆ ಕೂಡ ಮಾಡಿಕೊಳ್ಳಲಾರೆ. ನೀನು ಗುಣೇಂದ್ರಣ್ಣನನ್ನು ಬಿಟ್ಟು ಇಲ್ಲಿಗೆ ಬಂದರೆ ನಾನು ಅಲ್ಲಿಗೆ ಹೋಗಿರುವೆನು.

ತನ್ನ ಮಗಳ ಮನಸ್ಸನ್ನು ಆಕೆಯು ಚೆನ್ನಾಗಿ ಅರಿತಿದ್ದಳು. ಆದರೆ ಅವಳಿಗೆ ನವದ್ವೀಪಕ್ಕೆ ಹೋಗಲು ಧೈರ್ಯವಾಗಲಿಲ್ಲ. ಆದರೆ ಅವಳ ಮನಸುಮಾತ್ರ ನವದ್ವೀಪದ ಸುತ್ತಲೂ ಹಗಲಿರುಳು ಸುಳಿಯುತ್ತಿದ್ದಿತು.

ಇದೆ ಬಗೆಯಾಗಿ ಆರು ತಿಂಗಳುಗಳು ಕಳೆದುವು. ಅವಳಿಗೆ ಇಲ್ಲಿ ಇರಲಾಗಲಿಲ್ಲ. ಉತ್ಸವದ ನೆವಮಾಡಿಕೊಂಡು ನಂದಾನನ್ನು ಕರೆದುಕೊಂಡು ಸ್ಟೀಮರನ್ನು ಹತ್ತಿದಳು. ಅಲ್ಲಿಗೆ ಹೋಗಿ ತನ್ನ ಮಗಳು ತೀರ ಅಶಕ್ತಳಾಗಿರುವುದನ್ನೂ ಉದಾಸಳಾಗಿರುವುದನ್ನೂ ನೋಡಿ ಅವಳಿಗೆ ಬಹಳ ದುಃಖವಾಯಿತು. ಎನ್ನತೊಡಗಿದಳು "ಇಲ್ಲಿ ನಿನ್ನನ್ನು ನೋಡಿಕೊಳ್ಳುವವರು ಯಾರೂ ಇಲ್ಲ. ಅದಕ್ಕೇ ಹೀಗಾಗಿರುವೆ." ಇದಕ್ಕೆ ಮಗಳು "ಹೌದು, ಅಲ್ಲ" ಎಂದು ಉತ್ತರವನ್ನೇ ಕೊಡಲಿಲ್ಲ.

ಉತ್ಸವವು ಮುಗಿಯಿತು. ಆದರೂ ಕಲಕತ್ತೆಗೆ ಹಿಂತಿರುಗಿ ಹೋಗಲು ಮನಸ್ಸಾಗಲಿಲ್ಲ ಸುಲೋಚನೆಗೆ. ಹೇಮಾಗೆ ಇದು ಸರಿ ಬರಲಿಲ್ಲ. ಆಕೆಯೆಂದಳು "ಇನ್ನೂ ಎಷ್ಟು ದಿವಸ ಇರುವೆಯಮ್ಮಾ ಅಳಿಯನ ಮನೆಯಲ್ಲಿ? ಜನರು ಆಡಿಕೊಳ್ಳುವರು."

ಸುಲೋಚನೆಗೆ ಕೋಪ ಬಂದಿತು. ಅವಳೆಂದಳು "ಸ್ಪಷ್ಟವಾಗಿ ಏಕೆ ಹೇಳುವುದಿಲ್ಲ. ನಾನು ನಿನಗೆ ಭಾರವಾಗಿರುವೆನೆಂದು? ಇದು ನನ್ನ ಮಗಳ ಮನೆ; ಪರರದೇನು? ಅಲ್ಲಿಗೆ ಹೋಗಿ ನಾನು ಮಾಡುವುದಾದರೂ ಏನು? ಅಲ್ಲಿ ನನ್ನದೇನಿದೆ? ನೀನೆ ಹೇಳು ನೋಡೋಣ?"

ಸ್ವಲ್ಪ ಹೊತ್ತು ಹೀಗೆಯೆ ದಿಙ್ಮೂಢಳಾಗಿ ತಾಯಿಯನ್ನು ನೋಡುತ್ತನಿಂತು ಹೇಮಾ ಎಂದಳು. "ನಿನ್ನ ದೋಷವೇನೂ ಇಲ್ಲವಮ್ಮಾ. ಇದು ನಾವು ಹೆಂಗುಸರ ಸ್ವಾಭಾವಿಕ ಧರ್ಮವೆ ಆಗಿದೆ! ತನ್ನದು ಪರರದು ಎನ್ನುವುದನ್ನು ಒಂದೇ ದಿನದಲ್ಲಿ ಮರೆತುಬಿಡುವೆವು.

ದಿನಗಳು ಕಳೆಯಲಾರಂಭಿಸಿದುವು. ಪುನಃ ದುರ್ಗಾಪೂಜೆಯು ಬಂದಿತು. ಗುಣೇಂದ್ರ ವಿಜೃಂಭಣೆಯಿಂದ ಪೂಜಾಸಾಮಗ್ರಿಗಳನ್ನು ಕಳುಹಿಸಿದ. ಸುಲೋಚನಾ ಹೇಮಾನನ್ನು ಬೇರೆ ಕರೆದುಕೊಂಡು ಹೋಗಿ ಎಂದಳು "ಗುಣೀ, ಬ್ರಹ್ಮಸಮಾಜಿಯಾಗಿದ್ದರೂ ಎಲ್ಲವೂ ಗೊತ್ತಿದೆ ಅವನಿಗೆ. ರೀತಿ-ನಡತೆ-ವ್ಯವಹಾರ ಎಲ್ಲವನ್ನೂ ಬಲ್ಲ. ಅವನಂಥ ಬಲ್ಲವರು ಬಹಳಿಲ್ಲ.

ಸುಲೋಚನಾ ಬೀದಿಯಲ್ಲೆಲ್ಲ ಪ್ರಚಾರಮಾಡಿಬಿಟ್ಟಳು—ನಾನು ಮನೆಯಲ್ಲಿ ಇಲ್ಲದಿದ್ದರೂ ನನ್ನ ಮಗನೆ ಪೂಜಾಸಾಮಗ್ರಿಗಳನ್ನು ಕಳುಹಿದ್ದಾನೆ. ಬೀದಿಯಲ್ಲಿ ಮಿಠಾಯಿಹಂಚಿ, ಬಟ್ಟೆಬರೆ—ಸಾಮಾನುಗಳನ್ನು ಎಲ್ಲರಿಗೂ ತೋರಿಸಿ, ಪೂಜಾ ನೋಡಿಕೊಂಡು ಕಲಕತ್ತೆಗೆ ಹೋಗುವೆನೆಂದು. ಅಂದಿನಿಂದ ಅವಳು ಹೋಗುವ ಮಾತನ್ನು ಹೇಮಾ ಎತ್ತಲೆ ಇಲ್ಲ. ಈವೊತ್ತು ಅವಳು ಸುಮ್ಮನೇ ಇದ್ದಳು. ಆದರೆ ಸುಲೋಚನೆಗೆ ಇದರ ಅರ್ಥವೇ ಆಗಲಿಲ್ಲ. ಅವಳು ಮನದಲ್ಲಿಯೆ ಎಂದುಕೊಂಡಳು "ಪರಮಾತ್ಮನ ಕೃಪೆಯಿದ್ದರೆ ತಿಳಿದುಕೊಳ್ಳುವಿ ಮಗೂ, ಮಕ್ಕಳನ್ನು ಅಗಲಿಹೋಗಬೇಕೆಂದರೆ ತಾಯಿಗೆ ಪ್ರಾಣಹಾರಿಹೋದಂತೆ ಎಂದು."

ಪೂಜೋತ್ಸವವು ಮುಗಿಯುತ್ತಲೆ ಸುಲೋಚನೆಗೆ ಜೋರಾಗಿ ಮಲೇರಿಯಾ ಅಂಟಿಕೊಂಡಿತು. ದಿನದಿನಕ್ಕೆ ಅವಳ ದೇಹಸ್ಥಿತಿ ತೀರ ಕೆಡುತ್ತಸಾಗಿತು. ತಿಂಗಳಾದ ಬಳಿಕ ಹೇಮಾ ಎಂದಳು "ಅಮ್ಮಾ, ಪರಮಾತ್ಮನನ್ನು ಸ್ಮರಿಸು. ನೀನು ಬದುಕಬೇಕೆಂಬ ಆಸೆಯಿದ್ದರೆ ಗುಣೇಂದ್ರನನ್ನು ಕೂಗಿಕರೆ."

ಹೀಗೆನ್ನುವಾಗ ಆಕೆಯ ನಯನಗಳಿಂದ ನೀರು ಧಾರೆಯಾಗಿ ಹರಿಯತೊಡಗಿತು. ದೃಷ್ಟಿಮೇಲ್ಮಾಡಿ ಆಕೆಯು ಸುಮ್ಮನೆ ಕುಳಿತಿದ್ದಳು. ತಾಯಿಯೆಂದಳು "ಹಾಗೆಯೆ ಮಾಡು ಮಗೂ. ಅವನಿಗೆ ಕಾಗದ ಬರೆದುಬಿಡು."

ಹೇಮಾ ಗುಣೇಂದ್ರನಿಗೆ ತಾಯಿಯನ್ನು ಕರೆದುಕೊಂಡು ಹೋಗಲು ಕಾಗದ ಬರೆಯಿಸಿದಳು ಗುಮಾಸ್ತನಿಂದ.

ಎರಡು ದಿನಗಳ ತರುವಾಯ ಮಾನದಾ ಮತ್ತು ಆಳುಮಗ ಕಲಕತ್ತೆಯಿಂದ ಬಂದರು. ಗುಣೇಂದ್ರನೇ ಬರುವನೆಂದು ಹೇಮಾ ಆಶಿಸಿದ್ದಳು. ಆಕೆಯು ಮಾನದಾಳನ್ನು ಕೇಳಿದಳು "ಗುಣೇಂದ್ರಣ್ಣನೇಕೆ ಬರಲಿಲ್ಲ?"

"ಅವರಿಗೂ ಕಾಯಿಲೆ. ಎರಡು ವಾರವಾಯಿತು; ನೆಗಡಿ-ಕೆಮ್ಮು, ಕೆಮ್ಮು-ಜ್ವರ, ಒಂದಿಲ್ಲೊಂದು ಇದ್ದೇ ಇದೆ. ಇತ್ತಿತ್ತಲಾಗಿ ದಿನವೂ ಸ್ವಲ್ಪ ಜ್ವರ ಇದ್ದೇ ಇವೆ. ಇಲ್ಲದೆ ಹೋಗಿದ್ದರೆ ಅವರೇ ಬರುತ್ತಿದ್ದರು."

ಸುಲೋಚನಾ ಹೊರಟು ಹೋದಳು ಗುಣೇಂದ್ರ ಆಕೆಯ ಔಷಧೋಪ-ಚಾರದ ವ್ಯವಸ್ಥೆಯನ್ನು ಮಾಡಿ ಆಳುಮಕ್ಕಳೊಡನೆ ಹವಾ ಬದಲಾಯಿಸುವುದಕ್ಕೆ ಮಧುಪುರಕ್ಕೆ ಕಳುಹಿಸಿದ. ಹೋಗುವಾಗ ಸುಲೋಚನಾ ಎಂದಳು "ಮಗೂ ಗುಣೇ, ನೀನೂ ನನ್ನ ಸಂಗಡ ನಡೆ. ನಿನ್ನ ಆರೋಗ್ಯವೂ ಚೆನ್ನಾಗಿಲ್ಲ ಇಬ್ಬರೂ ಜೊತೆಗೇ ಹೋಗೋಣ." ಇದಕ್ಕೆ ಗುಣೇಂದ್ರ ಒಪ್ಪಲಿಲ್ಲ. ಕಲಕತ್ತೆಯಲ್ಲಿ ಅವನಿಗೆ ಕೆಲಸವಿದ್ದುದರಿಂದ ಅವನು ಅಲ್ಲಿಯೆ ಉಳಿದ.

ಮಧುಪುರಕ್ಕೆ ಹೋದಮೇಲೆ ಅವಳಿಗೆ ಸ್ವಲ್ಪ ವಿಶಾಂತಿಯು ದೊರೆಯಿತು. ಬೇಗ ಅವಳ ಆರೋಗ್ಯವು ಚೆನ್ನಾಯಿತು. ನವದ್ವೀಪಕ್ಕೂ ಕಲಕತ್ತೆಗೂ ಕಾಗದ ಬರೆದಳು- ಇನ್ನು ಸ್ವಲ್ಪ ದಿನಗಳಲ್ಲಿಯೆ ಕಲಕತ್ತೆಗೆ ಹಿಂತಿರುಗುವೆ.

ಹೋದವರ್ಷ ಮಾರ್ಗಶೀರ್ಷ ಶುಕ್ಲಪಕ್ಷದಲ್ಲಿ ಹೇಮಾನ ಮದಿವೆಯಾಗಿದ್ದಿತು. ಪುನಃ ಅದೇ ಮಾರ್ಗಶೀರ್ಷ ಶುದ್ಧ ದಶಮಿಯು ಬಂದಿತು. ಗುಣೇಂದ್ರನಿಗೆ ಇದು ಒಮ್ಮೆಗೆ ನೆನಪಾಯಿತು. ಅವನ ದೃಷ್ಟಿಯು ಪುಸ್ತಕದಿಂದ ಸ್ವಲ್ಪ ಅಗಲಿತು. ಅವನು ಮುಖವೆತ್ತಿ ಶೂನ್ಯದೃಷ್ಟಿಯಿಂದ ಕಿಡಿಕಿಯ ಹೊರಗೆ ನೋಡಲಾರಂಭಿಸಿದ. ಇಷ್ಟರಲ್ಲಿ ಆಳುಮಗನು ಹೊರಗಿನಿಂದ ಬಂದು "ಬಾಬೂಜೀ, ತಾರು ಬಂದಿದೆ" ಎಂದ.

ಅಂಚೆಯವನು ಗುಣೇಂದ್ರನ ಕೈಯಲ್ಲಿ ತಾರುಕೊಟ್ಟು ರುಜು ತೆಗೆದುಕೊಂಡು ಹೊರಟುಹೋದ ವಂದಿಸಿ.

ಗುಣೇಂದ್ರನಿಗೆ ತಾರು ಓದಿ ಬಹಳ ಆಶ್ಚರ್ಯವಾಯಿತು. ಅದು ಹೇಮಾನ ತಾರು. ಕಲಕತ್ತೆಗೆ ಬರುವುದಕ್ಕಾಗಿ ಹೊರಟಿದ್ದೇನೆಂದೂ ಹವಡಾ ಸ್ಟೇಶನ್ನಿಗೆ ಗಾಡಿ ಕಳಿಸಬೇಕೆಂದೂ ಬರೆದಿದ್ದಳು. ಏತಕ್ಕಾಗಿ ಬರುತ್ತಿದ್ದಾಳೆ? ಒಬ್ಬಳೆ ಬರುತ್ತಿದ್ದಾಳೆಯೆ? ಜೊತೆಯಲ್ಲಿ ಕಿಶೋರಿಬಾಬುಗಳು ಇದ್ದಾರೆಯೆ ಇಲ್ಲವೆ? ಯಾವುದೂ ಗೊತ್ತಾಗಲಿಲ್ಲ. ಮನೆಯಲ್ಲಿ ಹೆಂಗುಸರಾರೂ ಇಲ್ಲ, ಸುಲೋಚನಾ ಮಧುಪುರಕ್ಕೆ ಹೋಗಿದ್ದಳು. ಇದರಿಂದ ಗುಣೇಂದ್ರನಿಗೆ ಯಾವುದೂ ತಿಳಿಯದಾಯಿತು. ತೊಡಕಿನಲ್ಲಿ ಸಿಕ್ಕಿದ. ಗಾಡಿಯವನಿಗೆ ಸ್ಟೇಶನ್ನಿಗೆ ಗಾಡಿತೆಗೆದುಕೊಂಡು ಹೋಗಲು ಹೇಳಿದ. ಸಾಯಂಕಾಲವಾಗುವುದರೊಳಗೆ ಹೇಮಾ ಮನೆಗೆ ಬಂದಳು. ಜೊತೆಗೆ ಆಳುಮಗ

ಳಿದ್ದಳು. ಬೇಕಾಗುವ ಸಾಮಾನುಗಳೂ ಇದ್ದುವು. ಹೇಮಾನನ್ನು ಆಪಾದಮಸ್ತಕದ ವರೆಗೆ ನೋಡಿ ನಡುಗಿದ, ಕೇಳಿದ "ಹೀಗೇಕೆ ಹುಚ್ಚಿಯಂತೆ ವೇಷಧರಿಸಿಕೊಂಡೇಕೆ ಬಂದಿರುವೆ ಹೇಮಾ ?"

ಹೇಮಾ ಭೂಮಿಯ ಮೇಲೆ ಮಸ್ತಕವಿಟ್ಟು ವಂದಿಸಿ "ಮೇಲೆ ನಡೆಯಿರಿ, ಹೇಳುವೆ" ಎಂದಳು.

ಮೇಲೆ ಹೋಗಿ ಕುಳಿತು ಕೇಳಿದಳು "ಅಮ್ಮ, ಮಾಘಮಾಸಕ್ಕಿಂತಲೂ ಮೊದಲು ಬರ.ವುದಿಲ್ಲ ?"

"ಹಾಗೆಯೆ ಬರೆದಿದ್ದಾಳೆ."

"ಅಲ್ಲಿಯ ವರೆಗೆ ನಾನು ಬಂದ ಸುದ್ದಿಯನ್ನು ತಿಳಿಸುವುದು ಅಗತ್ಯವಿಲ್ಲ' ಆದರೆ—ನೋಡು ಗುಣೇಂದ್ರಣ್ಣಾ, ಆಶ್ಚರ್ಯದ ಮಾತು. ಆಚೆಯ ವರುಷ ಸರಿಯಾಗಿ ಇದೇ ದಿವಸ ಬಿಟ್ಟುಕೊಂಡಿದ್ದಿರಿ, ಸರಿಯಾಗಿ ಅದೇ ದಿನ ಇವೊತ್ತು ಹಿಂತಿರುಗಿದ್ದೇನೆ-"

ಗುಣೇಂದ್ರನಿಗೆ ತಿಳಿಯಲಿಲ್ಲ, ಕೇಳಿದ "ಏಕೆ ಹಿಂತಿರುಗಿ ಬಂದೆ ?"

ಹೇಮಾ ಸ್ವಾಭಾವಿಕ ಸ್ವರದಲ್ಲಿಯೆ "ಹಿಂತಿರುಗಿ ಬಂದೆ ನಿಜ ! ಇನ್ನು ಅಲ್ಲಿ ಇರುವುದು ಹೇಗೆ ? ನೀನು ನನ್ನ *ಬಿಳಿಸೀರೆಯನ್ನು ನೋಡಿಯೂ ತಿಳಿದುಕೊಳ್ಳ ಲಾರೆಯೇನು ? ಮೊನ್ನೆ ದಿನ ಹದಿಮೂರನೆಯ ದಿವಸದ ಕ್ರಿಯಾಕರ್ಮವನ್ನೆಲ್ಲ ತೀರಿಸಿ ಇವೊತ್ತು ಇಲ್ಲಿಗೆ ಬಂದಿರುವೆ" ಎಂದಳು.

ಗುಣೇಂದ್ರ ಸ್ತಬ್ಧನಾಗಿ ಕುಳಿತಿದ್ದ. ಸ್ವಲ್ಪ ಹೊತ್ತಿನ ನಂತರ ಕೇಳಿದ "ಯಾವ ಸುದ್ದಿಯನ್ನೇ ತಿಳಿಸಲಿಲ್ಲ—ಏನಾಗಿತ್ತು ಅವರಿಗೆ ?"

"ಹೋದ ಬುಧವಾರ ಸಾಯಂಕಾಲ ಕಾಲರಾದ ಲಕ್ಷಣಗಳು ಕಂಡವು. ಅದರ ಚಿಕಿತ್ಸೆ ಮಾಡಲು ಸಾಧ್ಯವಿದ್ದಷ್ಟೂ ಮಾಡಲಾಯಿತು. ಆದರೆ ಯಾವ ಲಾಭವೂ ಆಗಲಿಲ್ಲ. ಮರುದಿನ ಬೆಳಿಗ್ಗೆ ಹತ್ತುಗಂಟೆಗೆ ತೀರಿದರು."

ಸ್ವಲ್ಪ ಹೊತ್ತಿನ ನಂತರ ಗುಣೇಂದ್ರ ತಿರುಗಿ ಬರುತ್ತಿದ್ದ ಕಂಬನಿಗಳನ್ನು ಒರೆಯಿಸಿಕೊಂಡು, ಬಳಿಕ "ಅಮ್ಮ ಕೇಳಿದರೆ ಸತ್ತುಹೋಗುವಳು. ಉಳಿಯ ಲಿಕ್ಕಿಲ್ಲ. ಆದಷ್ಟು ದಿನ ಗೊತ್ತಾಗದಿರುವುದೆ ಒಳಿತು" ಎಂದ.

"ಮಾಡುವುದೇನು ಗುಣೇಂದ್ರಣ್ಣಾ ? ನೀವು ಪರಮಾತ್ಮನ ವಿರುದ್ಧವಾಗಿ ಒಳ ಸಂಚನ್ನು ನಡೆಯಿಸಿದ್ದಿರಿ; ನಾನೊಬ್ಬಳೆ ಅದರಲ್ಲಿ ಸೇರಲಿಲ್ಲ. ನಿಮ್ಮ ಕೃತಿಯಿಂದ ನಾನು ಮನದಲ್ಲಿಯೆ ನೊಂದುಕೊಳ್ಳುತ್ತಿದ್ದೆ. ನೀವು ನನ್ನ ಮಾತನ್ನು ಆಗ ಕೇಳಲಿಲ್ಲ. ಈಗ ಅಳುವುದರಿಂದೇನು ಪ್ರಯೋಜನ ?—ಬಹಳ ಹಸಿವಾಗಿದೆ, ಏನು ತಿನ್ನಬೇಕು.

---

* ಬಂಗಾಲದಲ್ಲಿ ವಿಧವೆಯರು ಬಿಳೀ ಸೀರೆಯನ್ನುಡುತ್ತಾರೆ.

ಹೇಳಿ? ಬಹಳ ದಣಿದಿದ್ದೇನೆ. ಈಗ, ನಾನು ಏನನ್ನೂ ಮಾಡಲಾರೆ. ಫಲಗಳೇನಾದರೂ ಇದ್ದರೆ ತಿಂದು ಇವೊತ್ತು ರಾತ್ರಿ ಕಳೆಯುವೆ."

"ಬೆಳಿಗ್ಗೆ ಏನೂ ತಿಂದಿರಲಿಲ್ಲವೇ?"

"ಇಲ್ಲ. ಬೇಗನೆ ಸ್ಟೀಮರಿಗೆ ಬರಬೇಕಾಗಿದ್ದಿತು."

ಮಾಘಮಾಸದ ಕೊನೆಗೆ ಸುಲೋಚನಾ ಬಂದಳು; ಅವಳು ಪೂರ್ತಿ ಗುಣವಾಗಿ ಬರಲಿಲ್ಲ. ಮನೆಗೆ ಬರುತ್ತಲೆ ಈ ಕಾಂಡವನ್ನು ನೋಡಿ ಹಾಸಿಗೆ ಹಿಡಿದಳು. ಈ ಶೋಕವು ಅವಳನ್ನು ಶಲ್ಯದಂತೆ ಚುಚ್ಚಿತು. ಸಾಕಷ್ಟು ಶುಶ್ರೂಷೆ ಮಾಡಲಾಯಿತು, ಆದರೆ ಪ್ರಯೋಜನವೇನು ಆಗಲಲ್ಲ. ಒಂದು ದಿನ ಆಕೆಯ ಕಾಲುಗಳೂ ಬಾತವು, ಇದರಿಂದ ಗುಣೇಂದ್ರನಿಗೆ ಚಿಂತೆಯಾಯಿತು. ಅವೊತ್ತು ಅವಳು ಗುಣೇಂದ್ರನು ಒಬ್ಬನೇ ಇರುವಾಗ ಎಂದಳು "ಏಕೆ ಮಗೂ, ವ್ಯರ್ಥವಾಗಿ ಪ್ರಯತ್ನವೇಕೆ ಮಾಡುವೆ? ನನಗೆ ಶಾಂತಿಯಿಂದ ಹೋಗಗೊಡು" ಎಂದಳು.

ಗುಣೇಂದ್ರ ಕಂಬನಿಗಳನ್ನು ತಡೆಯುತ್ತ "ಏನವ್ವಾ, ಏನಾಗಿದೆ ಇಷ್ಟು ನಿರಾಶಳಾಗಲಿಕ್ಕೆ?" ಎಂದ.

"ಸರಿ, ನೀನೇ ಹೇಳು ಈಗ ಆಶೆಮಾಡಲಿಕ್ಕೆ ನನ್ನ ಬಳಿ ಉಳಿದಿದೆ ಏನು?"

ಗುಣೇಂದ್ರ ತಲೆಬಾಗಿಸಿಕೊಂಡು ಸುಮ್ಮನೆ ಕುಳಿತಿದ್ದ.

"ಮಗೂ, ನಾನಿಷ್ಟು ಅಜ್ಞಾನಿಯಿಲ್ಲ. ತಿಳಿದೂ ತಿಳಿದೂ ನಾನು ಮಾಡಿದ ಪಾಪವು ನನ್ನನ್ನು ಸುಟ್ಟುಸುಟ್ಟು ಭಸ್ಮಮಾಡುತ್ತಿದೆ? ಸ್ವಲ್ಪ ಹೊತ್ತು ಸುಮ್ಮಗಿದ್ದು "ಒಂದು ಮಾತು ಗುಣೀ, ಸತ್ಯವಾಗಿ ಹೇಳು. ನೀನು ನನ್ನ ಹೇಮಾನನ್ನು ಪ್ರೀತಿಸುತ್ತಿದ್ದೆ, ನಾನು ಚೆನ್ನಾಗಿ ಬಲ್ಲೆ; ಇನ್ನೊಂದು ಸಲ ನೀನು ಆಕೆಯನ್ನು ಪ್ರೀತಿಸಲಾರೆಯಾ?" ಎಂದಳು.

ಗುಣೇಂದ್ರ ಮುಖ ಕೆಳಗೆ ಮಾಡಿಕೊಂಡೇ "ಅವಳನ್ನು ಚಿರಕಾಲದಿಂದಲೂ ಪ್ರೀತಿಸುತ್ತೇನವ್ವಾ, ಆಗ ಪ್ರೀತಿಸುತ್ತಿದ್ದೆ; ಈಗಲೂ ಪ್ರಿತಿಸುತ್ತೇನೆ. ಆಕೆಯ ಸಲುವಾಗಿ ನೀನು ಚಿಂತೆಮಾಡಬೇಡ. ನಾನು ಜೀವಿಸಿರುವ ವರೆಗೆ ಯಾರೂ ಅವಳಿಗೆ ತೊಂದರೆ ಕೊಡಲಾರರು" ಎಂದ.

ಸುಲೋಚನೆಯೆಂದಳು "ನನಗಿದು ಗೊತ್ತು. ನಿಮ್ಮಿಬ್ಬರಿಗೂ ನನ್ನದು ಇದು ಕಡೆಯ ಆಶೀರ್ವಾದ. ಅವಶ್ಯಕತೆಯುಂಟಾದರೆ ಈ ಮಾತನ್ನು ನೀನು ಆಕೆಗೆ ತಿಳಿಸು. ಹೌದು ಇನ್ನೊಂದು ಮಾತು ಮಗೂ—ಅತ್ತೆಮನೆಯಲ್ಲಿರುವಾಗ ಹೇಮಾ ನನಗೆ ಬರೆದಿದ್ದಳು—ಅಮ್ಮಾ, ನೀನು ಇದ್ದಲ್ಲಿಯೆ ಇರು. ಆ ಮನೆಯ ಗಾಳಿತಗಲಿದರೆ ಸಮಸ್ತ ನವದ್ವೀಪದ ಉದ್ಧಾರವಾಗುವುದು. ಆ ಮನೆಯಲ್ಲಿದ್ದು ಪುಣ್ಯ

ಗಳಿಸಲಾಗದಿದ್ದರೆ ವೈಕುಂಠದಲ್ಲಿಯೂ ನೀನು ಪುಣ್ಯಗಳಿಸಲಾರೆ. ಮಗೂ, ನನ್ನ ತಲೆಯ ಮೇಲೆ ಕೈಯಿಟ್ಟು ಆಶೀರ್ವದಿಸು ನಾನು ಪಾಪಮುಕ್ತವಾಗಬೇಕೆಂದು. ನನ್ನ ಅಪರಾಧವು ಎಷ್ಟು ದೊಡ್ಡದೆಂಬುದನ್ನು ನನ್ನ ಹೊರತು ಯಾರೂ ಅರಿಯ ಲಾರರು. ”

ಗುಣೇಂದ್ರ ಅಳಲಾರಂಭಿಸಿದ. ವಾಸ್ತವಿಕವಾಗಿಯೂ ಗುಣೇಂದ್ರ ಸುಲೋಚನೆ ಯನ್ನು ತಾಯಿಯಂತೆ ಗೌರವಿಸುತ್ತಿದ್ದ, ಪ್ರೀತಿಸುತ್ತಿದ್ದ. ಸುಲೋಚನೆಯೆಂದಳು “ ಹೇಮಾಗೆ ನಾನಾವ ಮಾತನ್ನೂ ಹೇಳಲಾರೆ. ಅವಳನ್ನು ನೋಡುತ್ತಲೆ ನನ್ನ ಎದೆಯಲ್ಲಿ ಹಾಹಾಕಾರವು ಉಂಟಾಗುತ್ತದೆ. ಜನಗಳು ಮಲತಾಯಿಯ ವಿಚಾರ ವಾಗಿ ಮಾತನಾಡುತ್ತಾರೆ; ಆದರೆ ನಾನು ಮಲತಾಯಿಗಿಂತಲೂ ಅವಳ ಶತ್ರು ವಾಗಿರುವೆ. ”

ಮರುದಿನ ರೋಗವು ಬಹಳ ಹೆಚ್ಚಿತು. ಬದುಕುವ ಆಶೆಯೆ ಉಳಿಯಲಿಲ್ಲ. ಉಸಿರಾಡಿಸಲು ಕಷ್ಟವಾಗತೊಡಗಿತು. ಹೇಮಾನನ್ನು ತನ್ನ ಬಳಿ ಕರೆದು ಆಕೆಗೆ ಮುತ್ತಿಡಲು ಗದ್ದವನ್ನು ಹಿಡಿವಳು —ಸರಿ, ಅಳುವು ಒತ್ತಿಬಂದಿತು.

“ ಹೇಮಾ, ಹೋಗಿಬರುವೆ ಮಗೂ. ”

ಹೇಮಾ ತಾಯಿಯ ಎದೆಯಮೇಲೆ ತಲೆಯಿಟ್ಟು ಬಿಕ್ಕಿಬಿಕ್ಕಿ ಅಳಲಾರಂಭಿ ಸಿದಳು. ಸನ್ನೆಮಾಡಿ ಅವಳನ್ನೆಬ್ಬಿಸಿ ಸುಲೋಚನೆಯೆಂದಳು.

“ ಅಳಬೇಡಮ್ಮ, ಮಗೂ. ಸುಖದಲ್ಲಿಯೂ ದುಃಖದಲ್ಲಿಯೂ ನಿನ್ನನ್ನು ಎದೆ ಗವಚಿಕೊಂಡು ಹದಿನೈದು ವರ್ಷ ಕಳೆದಿರುವೆ. ಈಗ ಸಮಯ ಬಂದಿರುವುದು; ನಿನ್ನ ತಂದೆಯವರ ಬಳಿಗೆ ಹೋಗುವೆ. ಇಂದು ನನಗೆ ಆನಂದದ ದಿವಸ. ನಾನು ಅಳುವುದಿಲ್ಲ ಹೇಮಾ. ನಿನಗೆ ಈ ಪರಿಯಿಂದ ಕಷ್ಟಕೊಡದೆ ಇದ್ದುದಾಗಿದ್ದರೆ ನಾನು ನಗುತ್ತ ಹೋಗುತ್ತಿದ್ದೆ. ಇವೊತ್ತು ನಾಚಿಕೆಯಿಂದ ನಿನ್ನ ಕಡೆಗೆ ನೋಡು ವುದೂ ಆಗುವುದಿಲ್ಲ, ಮಗೂ ! ”

ಹೇಮಾ ಅಳುತ್ತ ಎಂದಳು “ ಹೀಗೇಕೆ ನುಡಿಯುತ್ತಿರುವೆಯಮ್ಮ? ನನ್ನ ಹಣೆಯಲ್ಲಿ ಬರೆದಂತಾಯಿತು. ಇದರಲ್ಲಿ ನಿನ್ನದೇನು ತಪ್ಪು ? ”

ಸುಲೋಚನೆಯೂ ಅಳುತ್ತ “ ನನ್ನ ಕೈಗಳನ್ನು ನಾನೇ ಕತ್ತರಿಸಿಕೊಂಡಿ ರುವೆ. ಹಣೆಯಲ್ಲಿ ಬರೆದಂತಾಯಿತೆಂದು ಹೇಳುವೆ ಮಗೂ, ಆದರೆ ನಾನು ಮಧ್ಯ ದಲ್ಲಿ ಬರದೆಹೋಗಿದ್ದರೆ ನಿನ್ನಂಥ ಭಾಗ್ಯ ಯಾವ ಹುಡುಗಿಯದೂ ಇರುತ್ತಿರಲಿಲ್ಲ ಮಗೂ. ನನಗೆಲ್ಲವೂ ಗೊತ್ತು; ಆದುದರಿಂದಲೇ ಈ ದುಃಖವನ್ನು ಇಟ್ಟುಕೊಳ್ಳು ವುದಕ್ಕೆ ಹುಡುಕಿದರೂ ಜಾಗವು ಸಿಕ್ಕದಾಗಿದೆ. ತಿಳಿಯೂ ತಿಳಿದೂ ಮಾಡಿದ ಪಾಪ ವನ್ನು ಹೇಗೆ ನಿವಾರಿಸಿಕೊಳ್ಳುವುದು ಮಗೂ ? ” ಎಂದಳು.

ಅವಳ ಕಣ್ಣುಗಳಿಂದ ದೊಡ್ಡ ದೊಡ್ಡ ಕಂಬನಿಗಳು ಉದುರತೊಡಗಿದುವು. ಹೇಮಾ ತನ್ನ ಸೆರಗಿನಿಂದ ಅವನ್ನು ಒರೆಸಿದಳು. ಸ್ವಲ್ಪ ಹೊತ್ತಾದ ಮೇಲೆ ಸುಲೋಚನಾ ಪುನಃ ಹೇಳತೊಡಗಿದಳು "ಆದರೆ ಮಗೂ, ನನ್ನ ಮೇಲೆ ರೇಗಿಕೊಳ್ಳಬೇಡ; ಹೀಗೆ ಹೇಳುವುದರಿಂದ ನಿನ್ನ ಅಕಲ್ಯಾಣವಾಗಬಾರದೆಂದು ನಾನು ಹೇಳಲಿಲ್ಲ; ಆದರೆ ಇವೊತ್ತು ಸಾಯುವ ಕಾಲದಲ್ಲಿ ಕೈಜೋಡಿಸಿ ಹೇಳುತ್ತಿದ್ದೆ — "

ಹೇಮಾ ಕೂಡಲೆ ಆಕೆಯ ಬಾಯಮೇಲೆ ಕೈಯಿಟ್ಟು ಅಳುತ್ತ ಎಂದಳು "ನಾನೇನು ಮಾಡಿದರೆ ಸುಖಿಯಾಗುವಿ ಹೇಳಮ್ಮಾ, ಅದನ್ನೇ ನಾನು ಮಾಡುವೆ ನಾನೆಂದೂ ನಿನ್ನ ಮಾತನ್ನು ಮೀರಿಲ್ಲ ಅಮ್ಮಾ!"

ಸುಲೋಚನಾ ತನ್ನ ನಡುಗುತ್ತಿರುವ ಕೈಯನ್ನು ಹೇಮಾನ ತಲೆಯಮೇಲಿಟ್ಟು "ಇದರಿಂದಲೇ ಸುಟ್ಟು ಭಸ್ಮವಾಗುತ್ತಿದ್ದೇನೆ ಹೇಮಾ! ನಾನು ಹೇಳಬೇಕಾದುದನ್ನು ಗುಣೇಗೆ ಹೇಳಿಬಿಟ್ಟಿದ್ದೇನೆ, ಅವನೇ ನಿನಗೆ ಹೇಳುವ ಅಂತಹ ಆವಶ್ಯಕತೆಯುಂಟಾದರೆ. ನೀನು ಈ ಸೀರೆಯನ್ನು ಬಿಚ್ಚಿ, ಒಂದು ವರ್ಷದ ಹಿಂದೆ ನೀನು ಯಾವ ಸೀರೆಯನ್ನು ಉಟ್ಟು ಈ ಮಂಚದ ಬಳಿಗೆ ಬರುತ್ತಿದ್ದೆಯೊ, ಯಾವ ಆಭರಣಗಳನ್ನು ಧರಿಸಿ ದಸರೆಯ ದಿನ ನನಗೆ ವಂದಿಸಿದ್ದೆಯೊ, ಗುಣೇಂದ್ರನು ಕೊಟ್ಟ ಆ ಸೀರೆಯನ್ನೂ ಆಭರಣವನ್ನೂ ಧರಿಸಿಕೊಂಡು ಬಾ ಮಗೂ. ಕ್ಷಣಮಾತ್ರವಾದರೂ ನನಗೆ ನನ್ನ ಪಾಪದಿಂದ ಮುಕ್ತಿಯು ದೊರೆಯಲಿ" ಎಂದಳು.

ಹೇಮಾ ಎದ್ದು ಒಳಕ್ಕೆ ಹೋಗಿ ತಾಯಿಯ ಆಜ್ಞೆಯಂತೆ ಸೀರೆಯುಟ್ಟು, ಆಭರಣಗಳನ್ನಿಟ್ಟುಕೊಂಡು ಬಂದಳು. ತಾಯಿಯ ಅಧರಗಳ ಮೇಲೆ ಹರುಷದ ಗೆರೆಯು ಮೂಡಿದಂತೆ ಕಂಡಿತು. ಅವಳು ಸ್ವಲ್ಪ ಹೆಚ್ಚು ಸ್ವಸ್ಥತೆಯಿಂದ ನುಡಿದಳು "ಮಗೂ, ಈ ಮೂವತ್ತುನಾಲ್ಕು ವರ್ಷಗಳ ವರೆಗೆ ಎಂದೂ ಆಗದೆ ಇದ್ದ ಆ ಜ್ಞಾನ, ಬರದೆ ಇದ್ದ ಆ ಬುದ್ಧಿ ಇವೊತ್ತು ಒಂದು ಕ್ಷಣದಲ್ಲಿ ನನಗೆ ಬಂದುಬಿಟ್ಟಿತು. ಯಾವ ದಿವಸ ನಾನು ಮಧುಪುರದಿಂದ ಹಿಂತಿರುಗಿ ಬಂದು ನೋಡಿದೆನೊ ಅವೊತ್ತು ನನ್ನ ಎದೆಗೆ ಕತ್ತಿಯನ್ನು ಇರಿದಂತಾಯಿತು. ನನ್ನ ಮೇಲೆ ಸಿಡಿಲು ಬಿದ್ದಂತಾಯಿತು. ಅದು ನನ್ನ ಶತ್ರುಗಳ ಮೇಲೂ ಬೀಳದಿರಲಿ. ನನ್ನ ಆಣೆಯಾಗಿದೆ ಹೇಮಾ, ನೀನು ಈ ಉಡುಗೆಯನ್ನು ಎಂದಿಗೂ ಬಿಡಬೇಡ. ಈ ಬಗೆಯ ಉಡುಗೆಯನ್ನು ಧರಿಸಬೇಕೆಂದು ಆದಾವನು ಆಜ್ಞೆಮಾಡಿದನೋ! ಅವನನ್ನು ನಾನು ಇವೊತ್ತು ಶಪಿಸುವೆ. ಪರಮಾತ್ಮನು ಇಂತಹದರಿಂದ ಅವನನ್ನೂ ರಕ್ಷಿಸಲಿ. ಬೇಡ ಮಗೂ, ನನ್ನನ್ನು ತಡೆಯಬೇಡ. ನಾಳೆಯಿಂದ ನಾನು ನಿನಗೆ ಹೇಳಬರುವುದಿಲ್ಲ. ಇವೊತ್ತು ನಿನ್ನ ತಂದೆಯವರ ಬಳಿಗೆ ಹೋಗಿ ಅವರೊಡನೆ, ನೀನು ಸುಖಿಯಾಗಿರುವುದನ್ನು ನೋಡಬಯಸುವೆ."

ಅವಳು ಮಾತನಾಡುವುದು ಮೆಲ್ಲಮೆಲ್ಲನೆ ನಿಲ್ಲಲಾರಂಭಿಸಿತು. ಹೇಮಾ ತನ್ನ ಸೆರಗಿನಿಂದ ಆಕೆಯ ಕಂಬನಿಗಳನ್ನು ಒರೆಸಲಾರಂಭಿಸಿದಳು. ರೂಮಿನ ಹೊರಗೆ ಬೂಟಿನ ಶಬ್ದವಾದುದು ಕೇಳಿಸಿತು. ಹೇಮಾ ತಲೆಯ ಮೇಲೆ ಸೆರಗು ಹೊದ್ದು ಕೊಂಡಳು. ಇಷ್ಟರಲ್ಲಿ ಡಾಕ್ಟರರು ಗುಣೇಂದ್ರನೊಡನೆ ಬಂದರು. ಸುಲೋಚನೆಯು ಅವರನ್ನು ನೋಡಿ "ಈಗ ಡಾಕ್ಟರರನ್ನು ಏಕೆ ಕರೆತಂದೆ ಗುಣೀ? ಅವರನ್ನು ಹೊರಗಿನಿಂದಲೆ ವಿಜಿಟ್‌ಕೊಟ್ಟು ಕಳುಹಿಸಿ, ನೀನು ನನ್ನ ಹತ್ತಿರ ಬಂದು ಕುಳಿತುಕೊ" ಎಂದಳು.

"ಬಂದಿದ್ದಾರೆ ಡಾಕ್ಟರು ಎಂದ ಮೇಲೆ, ಒಂದು ಸಲ ನೋಡಿ ಹೋಗಲಿ—"

"ಬೇಡ ಮಗೂ, ಬೇಡ. ನನ್ನನ್ನು ಹೆಚ್ಚು ಉರಿಸಬೇಡ"

ಯುರೋಪಿಯನ್ ಡಾಕ್ಟರಿಗೆ ಇವರ ಮಾತು ತಿಳಿಯಲಿಲ್ಲ. ಅವರು ಒಳಗೆ ಬಂದು ಕುರ್ಚಿಯನ್ನೆಳೆದುಕೊಂಡು ಕುಳಿತೇಬಿಟ್ಟರು. ಜೇಬಿನೊಳಗಿಂದ ಥರ್ಮಾ ಮೀಟರ್ ತೆಗೆಯಲಾರಂಭಿಸಿದರು. ಸುಲೋಚನೆ ಅಧೀರಳಾಗಿ "ಇವರ ಬುದ್ಧಿಯ ನ್ನಾದರೂ ನೋಡು! ಇಷ್ಟು ಚಿಕ್ಕ ಕೊಳವೆಯಿಂದ ನನ್ನ ಜ್ವರ ಅಳೆದುನೋಡುವ ರಂತೆ! ಹೋಗು ಗುಣೀ, ನಂದಾನನ್ನು ಒಬ್ಬ ವೈದ್ಯರನ್ನು ಕರೆದುಕೊಂಡು ಬರಲು ಕಳಿಸು ಅವರು ಔಷಧಗಳನ್ನು ತರದೆ ಪ್ರಾಣ ಯಾವಾಗ ಹೋಗುತ್ತದೆಂಬುದನ್ನು ನೋಡಿ ಹೇಳಿದರೆ ಸಾಕು" ಎಂದಳು.

ಗ್ಯಾಸ್‌ಲೈಟನ್ನು ಆಕೆಗೆ ಸಹಿಸುವುದಾಗುತ್ತಿರಲಿಲ್ಲವೆಂದು ರೂಮಿನಲ್ಲಿ ಮೇಣ ಬತ್ತಿಯನ್ನು ಉರಿಸಿದ್ದರು. ಸಾಯಂಕಾಲವಾಗಿದ್ದಿತು. ಸುಲೋಚನೆಯೆಂದಳು "ಇವೊತ್ತಿನ ರಾತ್ರಿಯೆ ಕೊನೆಯ ರಾತ್ರಿಯು. ಇವೊತ್ತು ಕೂಡ ನಾನು ನನ್ನ ಮನ ದೊಳಗೆ ಇದ್ದುದನ್ನು ನಾಚಿಕೆ–ಸಂಕೋಚಗಳಿಲ್ಲದೆ ಹೇಳಲಾರೆನಾದರೆ ಪರಮಾತ್ಮನು ನನಗೆ ಇನ್ನಿಷ್ಟು ಕಠಿಣವಾದ ಶಿಕ್ಷೆಯನ್ನು ಕೊಟ್ಟಾನು. ನಿರ್ದೋಷಿಗಳಿಗೆ ಇಷ್ಟು ಶಿಕ್ಷಿಸಲಿಕ್ಕಿಲ್ಲ. ನನ್ನ ಪಾಪದ ಫಲವು ನನಗೇ ದೊರೆತು ಮುಗಿದುಹೋಗಲಿ."

ಬಳಿಕ ಅವಳು ಸ್ವಲ್ಪ ಹೊತ್ತು ಸುಮ್ಮನಿದ್ದಳು. ಒಂದು ದೀರ್ಘವಾದ ಉಸಿ ರನ್ನೆಳೆದು "ಉಸ್" ಎಂದಳು ಹೇಮಾ ಅವಳ ಎದೆಯಮೇಲೆರಗಿ "ಏನಮ್ಮಾ?" ಎಂದಳು.

ಸುಲೋಚನೆಯು ಮೆಲ್ಲಗೆ "ಏನಲ್ಲ ಮಗೂ, ನೀನೊಬ್ಬಳೆ ಇರುವಿಯೇನು ಹೇಮಾ?–ಗುಣೇಂದ್ರನ ಮುಖದಮೇಲಿನ ಕಳೆಯನ್ನು ನಾನು ನೋಡಿರುವೆ. ಅದನ್ನು ನೋಡಿ ಕಲ್ಲಿಗಾದರೂ ಕರುಣೆ ಬಂದೀತು. ಆದರೆ ನನಗೆ ಬರಲಿಲ್ಲ–ಅವನ ನಮಗೋಸ್ಕರ ಏನನ್ನು ಮಾಡಲಿಲ್ಲ? ಇರಲಿ, ಅವುಗಳನ್ನು ಇಲ್ಲಿ ಹೇಳುವುದಿಲ್ಲ.

ಮಗೂ, ಇಂತಹವರ ಮನಸ್ಸಿಗೆ ವ್ಯಥೆಯಾದರೆ ಸ್ವತಃ ಭಗವಂತನಿಗೂ ದುಃಖವಾಗುವುದೆಂಬುದನ್ನು ಮರೆಯಬೇಡ ಮಗೂ. ಅವನ ಧರ್ಮವೇ ನಿನ್ನ ಧರ್ಮ. ಇದು ನನ್ನ ಆಜ್ಞೆಯಲ್ಲ, ಅವನದು. ಅವನ ಆಜ್ಞೆಯ ಮೇರೆಗೆ ನೀವು ಒಂದೇ ದಿನದ ಭೇಟಿಯಿಂದ ಕೊನೆಗಾಲದ ವರೆಗೆ ಒಂದಾಗಿದ್ದಿರಿ. ಛೀ, ಮಗೂ, ನಾಚಿಕೆಯೇಕೆ? ಪ್ರತಿಯೊಬ್ಬರಲ್ಲಿಯೂ ಅಡಗಿಕೊಂಡು ಕುಳಿತು ಮಾತನಾಡುತ್ತಿರುವ ಅಂತರ್ಯಾಮಿಯ ಆಜ್ಞೆಯನ್ನು ಉಪೇಕ್ಷಿಸಬೇಡ, ತಿರಸ್ಕರಿಸಬೇಡ. ಅವನ ಆಜ್ಞೆಯು ನನ್ನ ಹೃದಯದಲ್ಲಿಯೂ ಮಿಡಿಯುತ್ತಿದ್ದಿತು. ಆದರೆ ಅತ್ತ ಕಡೆಗೆ ನಾನು ಕಿವಿಗೊಡದಾದೆ, ಅಹಂಕಾರದಿಂದ ಅದನ್ನು ಪಾಲಿಸದೆ ಹೋದುದರಿಂದ ಅದರ ಫಲವನ್ನು ಇವೊತ್ತು ಭೋಗಿಸುತ್ತಿದ್ದೇನೆ. ಆದರೆ ಮಗೂ, ನೀವಿಬ್ಬರೂ ನನ್ನ ಆ ಅನ್ಯಾಯ, ಆ ಪಾಪವನ್ನು ಒಪ್ಪಿಕೊಂಡು, ನನ್ನ ದುಷ್ಕರ್ಮವನ್ನು ಚಿರಸ್ಥಾಯಿಯಾಗಿ ಮಾಡಬೇಡಿರಿ, ಇಷ್ಟೇ ನನ್ನ ಕೊನೆಯ ಹೇಳಿಕೆ" ಎಂದಳು.

ಮಾನದಾ ಎಂದಳು "ಅಮ್ಮಾ, ವೈದ್ಯರು ಬಂದರು."

ಸುಲೋಚನೆಯು ಮೆಲ್ಲಗೆ "ಅವರನ್ನು ಕರೆದುಕೊಂಡು ಬಾ. ಹೇಮಾ ನೀನು ಸ್ವಲ್ಪ ಹೊರಗೆ ಹೋಗು ಮಗೂ" ಎಂದಳು.



# ಹೇಮಾನ ಹೊಸಬಗೆಯ ನಡತೆ

೫

ತಾಯಿಯು ಸತ್ತಬಳಿಕ ಹೇಮಾನ ನಡತೆಯಲ್ಲಿ ಆಶ್ಚರ್ಯಕಾರಕ ಬದಲಾವಣೆಯು ಕಾಣಲಾರಂಭಿಸಿತು. ಬಳಿಯಲ್ಲಿ ಇರುತ್ತಿದ್ದರೂ ಅಂತರಾಳದಲ್ಲಿ ಬಲು ದೂರದ ವರೆಗೆ ತನ್ನನ್ನು ದೂಡಿಕೊಂಡು ಹೋಗತೊಡಗಿದಳು. ಗುಣೇಂದ್ರ ಸಹನಶೀಲನು, ಶಾಂತಪ್ರಕೃತಿಯವನು. ಈ ಪರಿವರ್ತನೆಯನ್ನು ಕಂಡನಾದರೂ ಅದನ್ನು ಶಾಂತವಾಗಿ ಸಹಿಸುತ್ತಿದ್ದ. ಅದೇನೊ ಹೇಮಾನಿಗೆ ಧರ್ಮದಲ್ಲಿ ಹೆಚ್ಚು ಆಸಕ್ತಿಯುಂಟಾಗತೊಡಗಿತು. ಅವಳು ನಾಟಕ, ಕಾದಂಬರಿಗಳನ್ನು ಒಂದು ಬದಿಗಿರಿಸಿ ರಾಮಾಯಣ, ಮಹಾಭಾರತ, ಗೀತಾ, ಉಪನಿಷತ್ತುಗಳ ಅನುವಾದಗಳನ್ನು ಓದಲಾರಂಭಿಸಿದಳು. ತಾಯಿಯ ಆಜ್ಞೆಯನ್ನು ನೆನಪಿನಲ್ಲಿಟ್ಟುಕೊಂಡುದರಿಂದ ಬಿಳಿಯ ಸೀರೆಯನ್ನು ಉಡಲಿಲ್ಲ; ಕರ್ಣಕುಂಡಲಗಳನ್ನೂ ಕೈಯಲ್ಲಿನ ಬಳೆಗಳನ್ನೂ ಬಿಡಲಿಲ್ಲ. ಆದರೆ ವೈಧವ್ಯದ ಕಠೋರ ವ್ರತಗಳನ್ನು ಶ್ರದ್ಧೆಯಿಂದ ಆಚರಿಸಲಾರಂಭಿಸಿದಳು. ತಾನು ಸ್ವತಃ ಅಡಿಗೆಮಾಡಿಕೊಂಡು ಊಟ ಮಾಡತೊಡಗಿದಳು. ಮನೆಯ ಕೆಲಸಗಳನ್ನೆಲ್ಲ ಮುಗಿಸಿಕೊಂಡು ಉಳಿದ ಸಮಯವನ್ನೆಲ್ಲ ಧಾರ್ಮಿಕ ಕಾರ್ಯಗಳಲ್ಲಿ ಕಳೆಯಲಾರಂಭಿಸಿದಳು. ಗುಣೇಂದ್ರನ ಬಳಿಯಲ್ಲಿ ಆಗಾಗ ಸ್ವಲ್ಪ ಹೊತ್ತು ಕುಳಿತುಕೊಳ್ಳುತ್ತಿದ್ದರೂ ಕೆಲಸದ ನೆವದಿಂದ ಬೇಗ ಎದ್ದು ಹೋಗುತ್ತಿದ್ದಳು. ಅವನಿಗೆ ಅಂಜುತ್ತಿದ್ದಳೊ ಏನೊ! ಅವಳು ಈ ಬಗೆಯಾಗಿ ಬೇಗ ಎದ್ದುಹೋಗುವದನ್ನು ನೋಡಿ ಗುಣೇಂದ್ರ ಶೂನ್ಯದೃಷ್ಟಿಯಿಂದ ಕಿಡಿಕೆಯೊಳಗಿಂದ ಹೊರಗೆ ನೋಡುತ್ತ ಸ್ತಬ್ಧನಾಗಿ ಕುಳಿತುಬಿಡುತ್ತಿದ್ದ. ದಿನಗಳು ಕಳೆದಂತೆ ಆಕೆಯ ಧರ್ಮಾಚರಣೆಗಳು ದೃಢವಾಗುತ್ತ ನಡೆದುವು. ಜೈಲಿನಲ್ಲಿಯ ಅಧಿಕಾರಿಗಳು ಅಪರಾಧಿಯು ಕ್ಷೇತ್ರವನ್ನು ಸಂಕುಚಿತಮಾಡುವಂತೆ ಹೇಮಾ ತನ್ನ ಹೃದಯವಾಸಿಯಾದ ಒಬ್ಬನ ಕ್ಷೇತ್ರವನ್ನು ಪ್ರತಿದಿನವೂ ಹುಷಾರಿಯಿಂದ ಚಿಕ್ಕದನ್ನಾಗಿ ಮಾಡತೊಡಗಿದಳು.

ಅವಳೊಂದು ದಿವಸ ಅಕಸ್ಮಾತ್ ಕೇಳಿದಳು "ಗುಣೇಂದ್ರಣ್ಣಾ, ನಾನು ಮಂತ್ರೋಪದೇಶ ತೆಗೆದುಕೊಳ್ಳುವೆ" ಎಂದು.

"ಎಂತಹ ಮಂತ್ರ? ಗುರುಮಂತ್ರವನ್ನೆ?"

"ಹೌದು"

ಗುಣೇಂದ್ರ ನಗುತ್ತ ನುಡಿದ "ಹೆದರಬೇಕಾದುದೇನೂ ಇಲ್ಲ ಹೇಮಾ; ಆತ್ಮರಕ್ಷಣೆಗೋಸುಗ ನಿತ್ಯವೂ ಹೊಸ ಕವಚವನ್ನು ತೊಡುವ ಕಾರಣವಿಲ್ಲ."

ಹೇಮಾನಿಗೆ ಈ ಮಾತಿನ ಅರ್ಥವಾಗಲಿಲ್ಲವೇನೊ. ಅವಳು ಸ್ವಲ್ಪ ಹೊತ್ತು ಗುಣೇಂದ್ರನ ಮುಖವನ್ನು ನೋಡುತ್ತ ನಿಂತಳು. ಕೊನೆಗೆ " ಗುರುಮಂತ್ರವು ಅವಶ್ಯ ವಿಲ್ಲವೆ ? " ಎಂದು ಕೇಳಿದಳು.

" ಇದೆ, ಏಕಿಲ್ಲ ? ಇದೆ, ಆದರೆ ಗುರುಮಂತ್ರೋಪದೇಶ ತೆಗೆದುಕೊಳ್ಳಲು ನಿನಗಿನ್ನೂ ವಯಸ್ಸಾಗಿಲ್ಲ. ಮೇಲಾಗಿ ನಿನ್ನ ಗುರು ಯಾರೆಂಬುದನ್ನು ನಾನಿದು ವರೆಗೂ ಅರಿಯೆ. "

" ಆ ಗುರುಗಳೇನೂ ನನಗೇ ಬೇಕಾಗಿಲ್ಲ. ನಿನ್ನಿಂದ ನಾನು ದೀಕ್ಷೆ ತೆಗೆದು ಕೊಳ್ಳಬೇಕೆಂದಿದ್ದೇನೆ. "

" ನನ್ನಿಂದ ! ನನಗೇನು ಬರುತ್ತದೆ ದೀಕ್ಷೆಕೊಡಲಿಕ್ಕೆ ? ಅಲ್ಲದೆ ನೀನು ಹಿಂದೂ, ನಾನು ಬ್ರಹ್ಮಸಮಾಜೀ "

" ಅದು ನನಗೆ ಗೊತ್ತಿಲ್ಲ. ಆದರೆ ನಿನ್ನ ಧರ್ಮವೇ ನನ್ನ ಧರ್ಮ ಎಂದು ಅಮ್ಮ ಹೇಳಿರುವಳು. ಇದರರ್ಥವೇನು ಗುಣೇಂದ್ರಣ್ಣಾ ? "

ಇದರ ಅರ್ಥವು ಗುಣೇಂದ್ರನಿಗೆ ಗೊತ್ತಿದ್ದಿತು. ಅದನ್ನು ಅವಳಿಗೆ ಹೇಳದೆ ಸ್ವಾಭಾವಿಕವಾಗಿ " ಆಕೆಯ ಅಭಿಪ್ರಾಯ ಎಲ್ಲ ಧರ್ಮಗಳೂ ಒಂದೇ ಇರಬಹು ದೆಂದು ಇದ್ದೀತು. "

" ಆದರೆ ಎಲ್ಲ ಧರ್ಮಗಳೂ ಒಂದಲ್ಲ. "

ಸ್ವಲ್ಪ ಹೊತ್ತು ಸುಮ್ಮಗಿದ್ದು ಗುಣೇಂದ್ರ ಎಂದ " ಹೇಮಾ, ಈ ವಿಚಾರವಾಗಿ ನಾನೆಂದೂ ಬೇರೆಯವರೊಡನೆ ವಾದಿಸುವುದಿಲ್ಲ. "

" ಆದರೆ, ನಾನು ಬೇರೆಯವಳಲ್ಲ ? "

" ಹೌದು, ನೀನು ತೀರ ನನ್ನವಳು—ಆದರೆ ನಿನ್ನೊಡನೆಯೂ ನಾನು ಈ ವಿಷಯವನ್ನು ಚರ್ಚಿಸುವುದಿಲ್ಲ. "

ಹೇಮಾ ಹತಾಶಳಾಗಿ ಒಂದು ನೀಳವಾದ ಉಸಿರುಬಿಟ್ಟು " ನೀನು ಹೇಳ ದಿದ್ದರೆ, ನಾನು ಯಾರಿಂದ ಅರಿತುಕೊಳ್ಳಬೇಕು ? " ಎಂದಳು.

ಗುಣೇಂದ್ರ ಆಕೆಯ ಮುಖವನ್ನು ನೋಡಿ ಅನುತಾಪದಿಂದ " ನೀನು ಏನು ತಿಳಿದುಕೊಳ್ಳಬೇಕೆನ್ನುವಿ ? " ಎಂದು ಕೇಳಿದ.

" ಗುಣೇಂದ್ರಣ್ಣಾ, ಒಂದು ದಿನ ನೀನು ಊಟಮಾಡಿದ ತಟ್ಟೆಯಲ್ಲಿಯೆ ನಾನು ಹಠಾತ್ತಾಗಿ ಉಂಡಿದ್ದೆ. ನೀನು ಬೇಡವೆಂದು ಹೇಳಿದ್ದೆ. ಅಲ್ಲದೆ " ಇದನ್ನು ಮಾಡು ವುದು ಸರಿಯಲ್ಲ. ಅವರವರ ಜಾತಿಯಂತೆ ಅವರವರು ನಡೆಯಬೇಕು " ಎಂದೂ ಹೇಳಿದ್ದೆ. ಆದರೆ ಇವೊತ್ತು ಎಲ್ಲ ಧರ್ಮಗಳೂ ಒಂದೇ ಇವೆಯೆಂದನ್ನುವಿ. ಇದರಲ್ಲಿ ಯಾವ ಮಾತು ನಿಜವಾದುದು ? "

" ಅವೊತ್ತು ನಾನು ಹಾಗೆಯೆ ಹೇಳಿದ್ದೆ. ಆದರೂ ಎರಡೂ ಮಾತುಗಳು ನಿಜವಾಗಿವೆ. ಜಾತಿ, ಧರ್ಮ ಭಿನ್ನಭಿನ್ನವಾದುವು. ಒಂದು ದೇಶಾಚಾರ ಅಥವಾ ಲೋಕಾಚಾರದ್ದು, ಕೇವಲ ಇಹಕಾಲದ್ದು. ಮತ್ತೊಂದು ಇಹಕಾಲದ್ದೂ, ಪರ ಕಾಲದ್ದೂ ಇದೆ. ಧರ್ಮವನ್ನು ಮನ್ನಿಸಿ ನಡೆಯುವುದು ಜಾತಿಯನ್ನು ಮನ್ನಿಸಿ ನಡೆದಂತೆ ಎಂದು ಇವರ ಅರ್ಥವಾಗುವುದಿಲ್ಲ ಜಾತಿಯಂತೆ ನಡೆದರೆ ಧರ್ಮದಂತೆ ನಡೆದಂತೆಯೆಂದೂ ಇದರರ್ಥವಾಗುವುದಿಲ್ಲ. ಜಾತಿಯಂತೆ ನಡೆಯದಿದ್ದರೆ ಕಷ್ಟ ಗಳನ್ನು ಅನುಭವಿಸಬೇಕಾಗುವುದು, ಕಷ್ಟವನ್ನು ಸಹಿಸುವ ಶಕ್ತಿ ಎಲ್ಲರಲ್ಲಿಯೂ ಇರುವುದಿಲ್ಲ; ಯಾವಾಗಲೂ ಇದು ಆವಶ್ಯಕವಾಗಿಯೂ ಇಲ್ಲ. ಆದುದರಿಂದಲೆ ನಿನಗೆ ಅವೊತ್ತು ಹಾಗೆ ಹೇಳಿದ್ದೆ " ಎಂದು ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಹೇಳಲಾರಂಭಿಸಿದ " ಹೇಮಾ, ಇವೆರಡೂ ಭಿನ್ನ ಭಿನ್ನವಾಗಿಯೂ ಇವೆ, ಕೂಡಿಯೂ ಇವೆ. ಕೂಡಿಯೂ ಇವೆಯೆನ್ನುವುದರ ಅರ್ಥವೇನೆಂದರೆ ದೇಶಭೇದದಿಂದ ಧರ್ಮ ದಲ್ಲಿಯೂ ಅನೇಕ ಭೇದಗಳಾಗಿವೆ. ಧರ್ಮಗಳ ಮೂಲತತ್ವವು ಒಂದೇ. ಅದು ಮಾತ್ರ ಪರಕಾಲದ್ದು. 'ಮೃತ್ಯುವೇ ನಮ್ಮ ಕೊನೆಯಲ್ಲ' ಎಂಬುದೇ ಮೂಲತತ್ತ್ವ. ಈ ತಳಹದಿಯ ಮೇಲೆ ನೀನು ಹಿಂದೂ ಆಗಿ ನಿಂತಿರುವೆ, ನಾನು ಬ್ರಹ್ಮಸಮಾಜಿ ಯಾಗಿ ನಿಂತಿರುವೆ. ಸರ್ವ ಧರ್ಮಗಳೂ ಈಶ್ವರನನ್ನು ಒಪ್ಪುತ್ತವೆಂದೂ ಎನ್ನ ಲಾಗುವುದಿಲ್ಲ; ಆದರೆ ಕೇವಲ ಸಾಯುವುದರಿಂದ ಮುಕ್ತಿಯು ದೊರೆಯುವುದಿಲ್ಲ ವೆಂಬುದನ್ನು ಹಬಸೀ ಜನಗಳ ದೇಶದಿಂದ ಲಾಪಲ್ಯಾಂಡ್ ದೇಶದ ನಡುವಿದ್ದ ಎಲ್ಲ ದೇಶಗಳ ಧರ್ಮಗಳೂ ಸಾರುತ್ತವೆ. ಮೃತ್ಯುವಿನ ಆನಂತರದ ವಿಷಯವನ್ನು ನೀನೂ ಚಿಂತಿಸುತ್ತೀಯೆ, ನಾನೂ ಚಿಂತಿಸುತ್ತೇನೆ. ಆದರೆ ನಾವಿಬ್ಬರೂ ಭಿನ್ನ ಭಿನ್ನ ರೀತಿ ಯಿಂದ ಚಿಂತಿಸುವ ಸಂಭವವಿದೆ; ಚಿಂತನೆಗೆ ಕಾರಣವಾದುದು ಅದೊಂದೇ ಮಾತು. ಸಾಯುವಾಗ ತಾಯಿಯು ಇದೇ ಭಾವನೆಯಿಂದ ಉಪದೇಶಕೊಟ್ಟು ಹೋಗಿದ್ದಾಳೆ."

ಹೇಮಾ ಸ್ವಲ್ಪ ಹೊತ್ತು ಸುಮ್ಮಗಿದ್ದು " ಕೇವಲ ಚಿಂತಿಸುವುದರಿಂದ ಕೆಲಸ ವಾಗದು, ಅದಕ್ಕೆ ಉಪಾಯವನ್ನಾದರೂ ಮಾಡಬೇಕಲ್ಲವೆ ? " ಎಂದಳು.

" ಅವಶ್ಯವಾಗಿ, ಏಕೆ ಮಾಡಬಾರದು ? ಈ ಉಪಾಯದ ಶೋಧನೆಗಾಗಿಯೆ ಇಷ್ಟು ಜಗಳ, ಇಷ್ಟು ವಿವಾದ. ನಿನ್ನ ಉಪಾಯಗಳು ನನಗೆ ಸರಿಯೆನಿಸುವುದಿಲ್ಲ, ನನ್ನ ಉಪಾಯಗಳು ನಿನಗೆ ಸರಿಯೆನಿಸುವುದಿಲ್ಲ, ಇದು ಕೇವಲ ಅನುಮಾನದ ವಸ್ತುವು, ಪ್ರಮಾಣದ್ದಲ್ಲ; ಎಂದ ಮಾತ್ರಕ್ಕೆ ವಿವಾದವು ನಿಲ್ಲುವುದಿಲ್ಲ, ಜಗಳವೂ ಬಗೆಹರಿಯುವುದಿಲ್ಲ. ಸರಿ, ಈವಾಗ ನಿನಗೆ ಅಡಿಗೆಮಾಡುವ ಸಮಯವಾಯಿತು ಹೇಮಾ "

ಹೇಮಾ ಏನೂ ಆಡದೆ ಮೆಲ್ಲಮೆಲ್ಲಗೆ ಎದ್ದು ಹೋದಳು. ಗುಣೇಂದ್ರ ಶೂನ್ಯ ದೃಷ್ಟಿಯಿಂದ ಶೂನ್ಯದಕಡೆಗೆ ನೋಡುತ್ತ ಕುಳಿತಿದ್ದ.

"ಗುಣೇಂದ್ರಣ್ಣಾ!"

ಗುಣೇಂದ್ರಣ್ಣಾ ಬೆಚ್ಚಿಬಿದ್ದು ಹೊರಳಿ ನೋಡಿದ. "ಏನು ಹೇಮಾ?"

"ನಾನು ನಡೆಯುತ್ತಿರುವ ಮಾರ್ಗವು ಸರಿಯಾಗಿದೆಯೆ?"

"ನಾನು ಹೇಗೆ ಹೇಳಲಿ ಹೇಮಾ? ನಿನಗೇ ಅದು ಗೊತ್ತು. ನಿಜವಾಗಿಯೂ ನಿನಗೆ ಆ ಮಾರ್ಗದಿಂದ ಶಾಂತಿಯು ದೊರೆಯುತ್ತಿದ್ದರೆ ಆನಂದವು ಸಿಕ್ಕುತ್ತಿದ್ದರೆ ಅದು ಸರಿಯಾದ ಮಾರ್ಗ."

"ಆದರೆ ನನಗೆ ಆನಂದವು ಮಾತ್ರ ದೊರೆಯುತ್ತಿಲ್ಲ."

ಆಕೆಯ ದೀನದನಿ ಕೇಳಿ ಗುಣೇಂದ್ರಣ್ಣನ ಕಣ್ಣುಗಳಲ್ಲಿ ನೀರು ತುಂಬಿಬರಲಿದ್ದುವು. ಅವನ್ನು ಅವನು ಪ್ರಯತ್ನಪೂರ್ವಕವಾಗಿ ತಡೆದು "ಹಾಗೆ ಇರುತ್ತಿದ್ದರೆ ಆ ಮಾರ್ಗವನ್ನು ಅನುಸರಿಸುವಿಯೇಕೆ?" ಎಂದು ಮೆಲ್ಲಗೆ ನುಡಿದ.

"ಗೊತ್ತಾಗಲೊಲ್ಲದು ಗುಣೇಂದ್ರಣ್ಣಾ, ಯಾರೋ ನನ್ನನ್ನು ಎಳೆದುಕೊಂಡು ಹೋಗುವಂತೆ ಎನಿಸುತ್ತಿದೆ. ಬಲಾತ್ಕಾರದಿಂದ ನನ್ನ ಕಡೆಯಿಂದ ಹೀಗೆ ಮಾಡಿಸುತ್ತಿರುವಂತೆ ತೋರುತ್ತದೆ. ನನ್ನನ್ನು ಹೀಗೆ ಹರಿಯಗೊಡದಿರುವುದು ಸಾಧ್ಯವಾಗದಾಗಿದೆ."

ಗುಣೇಂದ್ರನಿಗೆ ಏನು ಹೇಳಬೇಕೆನ್ನುವುದೇ ತೋಚದ್ದಾಯಿತು. ಕೊನೆಗೆ ಎಂದ "ಹೊಸದಾಗಿ ಪ್ರಾರಂಭಿಸಿರುವುದರಿಂದ ಆನಂದ ದೊರೆಯುತ್ತಿರಲಿಕ್ಕಿಲ್ಲ. ಆ ಮೇಲೆ ದೊರೆದೀತು."

ಹೇಮಾ "ದೊರೆತೀತು?" ಎಂದು ಉತ್ಸುಕಳಾಗಿ ಕೇಳಿದಳು.

"ಅವಶ್ಯವಾಗಿ. ಧರ್ಮದಿಂದ ಸುಖಶಾಂತಿಯು ದೊರೆಯದಿದ್ದರೆ ಇನ್ನಾವುದರಿಂದ ದೊರೆಯುವುದು? ಒಂದು ದಿವಸ ನೀನು ಅವಶ್ಯ ಸುಖಿಯಾಗುವೆಯೆಂದು ನಿನ್ನನ್ನು ಹರಸುವೆ."

× × × ×

ಎರಡು ದಿನಗಳಾದ ಮೇಲೆ ಗುಣೇಂದ್ರ ತೆರೆದ ಮನೆಯ ಮಾಳಿಗೆಯ ಮೇಲೆ ಚಾಪೆಯನ್ನು ಹಾಸಿಕೊಂಡು ಮಲಗಿದ್ದ. ಬೆಳದಿಂಗಳು ಬಿದ್ದಿದ್ದಿತು. ಹೇಮಾ ಬಂದು ಅವನ ಕಾಲಬಳಿ ಕುಳಿತಳು. "ನಿನ್ನ ಅಂಗಾಲಮೇಲೆ ಕೈಯಾಡಿಸಲಾ?" ಎಂದು ಕೇಳಿದಳು.

"ಹೂಂ" ಎಂದು ಗುಣೇಂದ್ರ ಹಾಗೆಯೆ ಕಣ್ಣುಮುಚ್ಚಿಕೊಂಡು ಮಲಗಿದ. ಬೆಳದಿಂಗಳಲ್ಲಿ ಬೆಳಗುತ್ತಿರುವ ಹೇಮನಲಿನಿಯ ಮುಖವನ್ನು ನೋಡುವ ಸಾಹಸ ಅವನಿಗಾಗಲಿಲ್ಲ. ಹೇಮಾ ಹಾಗೆಯೆ ಅಂಗಾಲಮೇಲೆ ಕೈಯಾಡಿಸುತ್ತ ಆಕಸ್ಮಾತ್ತಾಗಿ ಕೇಳಿಬಿಟ್ಟಳು "ಗುಣೇಂದ್ರಣ್ಣಾ, ವಿಧವಾವಿವಾಹಮಾಡಿಕೊಳ್ಳುವುದು ಸರಿಯೇನು?"

ಗುಣೇಂದ್ರ ಕಣ್ತೆರೆಯುವಲೆ ಕೇಳಿದ "ನಿನ್ನ ಅಭಿಪ್ರಾಯವೇನು ?"

"ನಾನು ಹೇಳುವುದಕ್ಕೆ ಬಂದಿಲ್ಲ, ಕೇಳುವುದಕ್ಕೆ ಬಂದಿದ್ದೇನೆ."

"ಅಂಗಾಲಮೇಲೆ ಕೈಯಾಡಿಸುವುದು ಆದರ ಮುನ್ನುಡಿಯೆಂದು ನನಗೆನಿಸುತ್ತಿದೆ."

ಹೇಮಾ ಸ್ವಾಭಾವಿಕಸ್ವರದಲ್ಲಿಯೆ "ಹಾಗೇನೂ ಇಲ್ಲ. ನಿನ್ನ ಕಾಲಬಳಿ ಕುಳಿತಕೂಡಲೆ ಕೈಯಾಡಿಸುವ ಇಚ್ಛೆಯಾಗುತ್ತದೆ" ಎಂದಳು.

ಗುಣೇಂದ್ರ ಮಾತನಾಡಲಿಲ್ಲ. ತನ್ನ ನಾಲಿಗೆಯ ವಿಶ್ವಾಸ ಅವನಿಗೆ ಇರಲಿಲ್ಲ.

"ಹೌದು, ಹೇಳಲೇ ಇಲ್ಲವಲ್ಲ!"

ಗುಣೇಂದ್ರ ಸುಮ್ಮನೇ ಇದ್ದ. ಹೇಮಾ ಅಂಗಾಲಮೇಲೆ ಬೆರಳಿಂದ ಮೆಲ್ಲಗೆ ಬಡೆದು "ಹೇಳಿ, ಬೇಗ" ಎಂದಳು.

"ಹೇಳುತ್ತೇನೆ. ನನ್ನ ಮಾತಿಗೆ ಮೊದಲು ಉತ್ತರಕೊಡು."

"ಏನು ?"

"ನಿನ್ನ ಗಂಡನನ್ನು ಪ್ರೀತಿಸುತ್ತಿದ್ದೆಯಾ ?"

"ಎಷ್ಟೂ ಇಲ್ಲ. ಪ್ರೀತಿಯ ಮಾತು ನನ್ನ ಮನದಲ್ಲಿಯೆ ಬರಲಿಲ್ಲ. ಅಲ್ಲಿಂದ ಒಂದು ಕವಡಿಯ ಸಾಮಾನನ್ನೂ ನಾನು ತೆಗೆದುಕೊಂಡು ಬರಲಿಲ್ಲ. ಅವರು ಕೊಟ್ಟ ಸೀರೆಯನ್ನೂ ಉಟ್ಟುಕೊಂಡು ಬರಲಿಲ್ಲ. ಊಟಮಾಡಿದ್ದೇನೆ ನಿಜ, ಆದರೆ ಆದರ ಎರಡಷ್ಟು ಕೊಟ್ಟು ಬಂದಿದ್ದೇನೆ. ಇಷ್ಟೇ ಅವರೊಡನೆ ನನ್ನ ಸಂಬಂಧವಿದ್ದಿತು ?"

"ಆದರೆ ಸತೀಸಾಧ್ವಿಯರು ತಮ್ಮ ಪತಿಯನ್ನು ಪ್ರೀತಿಸುತ್ತಾರೆ. ವಿಧವೆಯರಾದ ಮೇಲೂ ಅವರನ್ನೇ ನೆನಸಿಕೊಂಡಿರುವರು, ಬೇರೆ ಮದಿವೆಯನ್ನು ಮಾಡಿಕೊಳ್ಳುವುದಿಲ್ಲ. ಸಾಯುವಾಗ ನಿನ್ನ ತಾಯಿಯಂತೆ ಪತಿಯ ಬಳಿಗೆ ಹೋಗುವೆನೆಂಬ ಭಾವನೆಯನ್ನೇ ಇಟುಕೊಂಡಿರುತ್ತಾರೆ."

"ನೀವು ಬಲವಂತ ಮಾಡಿ ಲಗ್ನಮಾಡಿದಿರಿ. ನಾನೂ ಸತೀಸಾಧ್ವಿಯಾಗಿದ್ದೇನೆ. ಏಕೆಂದರೆ ಸಾಯುವಾಗ ನಾನೂ "ನಿನ್ನ ಬಳಿಗೆ ಹೋಗುವೆ" ಎಂಬುದನ್ನೇ ಮನದಲ್ಲಿಟ್ಟುಕೊಂಡಿರುವೆ. ಒಳ್ಳೇದು ಗುಣೇಂದ್ರಣ್ಣ, ಸತ್ತು ನಾನು ನಿನ್ನ ಬಳಿಗೆ ಹೋಗಬಲ್ಲೆನಷ್ಟೆ ?"

ಅವಳ ಮಾತುಗಳಲ್ಲಿ ಜಡತೆಯಿರಲಿಲ್ಲ, ಅಸ್ಥಿರತೆಯಿರಲಿಲ್ಲ, ನಾಚಿಕೆಯೂ ಇರಲಿಲ್ಲ. ಆ ದಿನದ ಹೇಮಾನ ಕೂಡ ಇಂದಿನ ಹೇಮಾನ ಸಂಬಂಧವಾವುದೂ ಇರಲಿಲ್ಲವೇನೊ ? ಗುಣೇಂದ್ರ ದಿಙ್ಮೂಢನಾದ. ಹೇಮಾ ಕೇಳಿದಳು "ಹೇಳು ಹೋಗಬಲ್ಲೆನೊ ಇಲ್ಲವೊ ?"

“ ಇಲ್ಲ. ”

“ ಇಲ್ಲ, ಏಕೆ ? ”

“ ನನ್ನ ಕರ್ಮದ ಫಲವು ನನ್ನನ್ನು ಎಲ್ಲಿಗೆ ಒಯ್ಯುವುವೊ ? ನಾನರಿಯೆ. ನಿನ್ನ ಕರ್ಮದ ಫಲವು ನಿನ್ನನ್ನು ಎಲ್ಲಿಗೆ ಒಯ್ಯುವುವೊ ? ನೀನರಿಯೆ. ನಾನು ನನ್ನ ಕರ್ಮದ ಫಲವಾಗಿ ಸತ್ತಮೇಲೆ ಪಶುವಾಗಬಹುದು. ನೀನು ಬ್ರಾಹ್ಮಣರ ಮಗಳಾಗಿ ಹುಟ್ಟಬಹುದು. ನನ್ನನ್ನು ಹೇಗೆ ಪಡೆಯುವಿ ಆವಾಗ ? ಕರ್ಮಫಲವು ನಿಜವಾದುದಾಗಿದ್ದರೆ ಪತಿ–ಪತ್ನಿಯ ಸಂಬಂಧವು ಎಂದೂ ಚಿರವಾಗಿರಲಾರದು. ನಮ್ಮೀ ಕಾಲ್ಪನಿಕ ಸಂಬಂಧವು ಬಹಳ ತುಚ್ಛವಾಗಿದೆ. ಎಷ್ಟು ಭೇದ, ಎಷ್ಟು ಭಿನ್ನತೆ, ಎಷ್ಟು ಮೇಲು-ಕೀಳು ಇದೆಯೆಂಬುದನ್ನು ನೀನು ಕಣ್ಣೆದುರು ನೋಡು ತ್ತಿರುವೆ. ಇದೆಲ್ಲವೂ ಕರ್ಮದ ಫಲವಾಗಿಯೂ ಇರಬಹುದು. ಇದನ್ನು ಪ್ರೇಮದ ಯಾವ ಬಗೆಯ ಆಕರ್ಷಣೆಯೂ ಹೋಗಲಾಡಿಸದು. ಈ ಸಂಸಾರದಲ್ಲಿ ಆದೆಷ್ಟೋ ಗಂಡಂದಿರು ಭಂಡರಾಗಿದ್ದರೂ ಹೆಂಡಂದಿರು ಸಾಧ್ವಿಗಳಾಗಿಯೇ ಇರುತ್ತಾರೆ. ಅವರ ಗಂಡಂದಿರು ಸತ್ತಮೇಲೆ ಎತ್ತಾಗುತ್ತಾರೆಂದು ನಿಮ್ಮ ಶಾಸ್ತ್ರಗಳಲ್ಲಿ ಹೇಳಿದೆ. ಎಂದ ಮೇಲೆ ಹೇಮಾ, ಹೆಂಡಂದಿರು ಸತೀಸಾಧ್ವಿಗಳಾಗಿದ್ದುಕೊಂಡು, ಒಳ್ಳೆ ಕರ್ಮ ಗಳನ್ನು ಮಾಡಿ ಸತ್ತಬಳಿಕ ಆ ಎತ್ತುಗಳೊಡನೆ ಹಸುವಾಗಿ ಇರಲಿಕ್ಕೆ ಹೋಗ ಬೇಕೇನು ? ಇಲ್ಲ. ಹೀಗೆ ಆಗಲಾರದು. ಹೀಗಾಗಿ ಬಿಟ್ಟರೆ ಒಳ್ಳೆಯ ಕರ್ಮ, ಕೆಟ್ಟ ಕರ್ಮ ಇವೆರಡರಲ್ಲೂ ಯಾವ ಭೇದವೂ ಉಳಿಯಲಿಕ್ಕಿಲ್ಲ. ಸ್ತ್ರೀ ತನ್ನ ಸುಕರ್ಮಗಳಿಂದ ಸ್ವರ್ಗಕ್ಕೆ ಹೋಗಬಹುದು, ಪತಿಯು ತನ್ನ ದುಷ್ಕರ್ಮಗಳಿಂದ ಜನ್ಮಜನ್ಮಾಂತರ ನರಕದಲ್ಲಿ ಬಿದ್ದುಕೊಂಡಿರಲೂಬಹುದು. ಸಾವಿರಾರು ಪ್ರಯತ್ನ ಗಳನ್ನು ಮಾಡಿದರೂ ಒಂದಾಗಲು ಉಪಾಯವೇನಾದರೂ ಇದೆಯೆ ? ”

ಹೇಮಾ ಬಹಳ ಹೊತ್ತಿನ ವರೆಗೆ ಸುಮ್ಮಗೆ ವಿಚಾರಿಸುತ್ತಿದ್ದಳು. ಬಳಿಕ ಮೆಲ್ಲಮೆಲ್ಲಗೆ “ ಹಾಗಾದರೆ, ನಿಜವಾಗಿಯೂ ಒಂದಾಗಲು ಯಾವ ಉಪಾಯವೂ ಇಲ್ಲವೆ ? ” ಎಂದು ಕೇಳಿದಳು.

“ ಇಲ್ಲ. ಆ ಮೇಲೆ ಅದರ ಆವಶ್ಯಕತೆಯೆ ಇಲ್ಲ. ಅದಕ್ಕೋಸ್ಕರ ಎಲ್ಲರಿ ಗಿಂತಲೂ ಶ್ರೇಷ್ಠನಾದವನ್ನು, ಒಂದು ಸಲ ಬಳಿಗೆ ಹೋದ ಮೇಲೆ ಪುನಃ ಬೇರೆ ಯವರ ಬಳಿಗೆ ಹೋಗಲು ಇಚ್ಛೆಯಾಗದೆಂದವನನ್ನು ಕೂಡುವ ಇಚ್ಛೆಯನ್ನು ಮಾಡುವುದು ಉತ್ತಮ. ಅರ್ಥಾತ್ ಎಲ್ಲ ಬಗೆಯ ಕೂಡುವಿಕೆಯ ಇಚ್ಛೆಯು ತನ್ನಿಂದ ತಾನೇ ತನ್ನಲ್ಲಿಯೆ ಪೂರ್ತಿಯಾಗುವಿಕೆಯ ಮಾಡುವವನ ಬಳಿಸಾಕು. ಈ ಮಾರ್ಗದಿಂದ ನಿನ್ನನ್ನು ಯಾರೂ ಚ್ಯುತಮಾಡದಿರಲಿ, ನಮ್ಮಿಂದ ಕೊಡಲ್ಪಟ್ಟ

ಎಲ್ಲ ದುಃಖಗಳೂ ನಿನಗೆ ಸಾರ್ಥಕವಾಗಿ ಪರಿಣಮಿಸಲಿ ಎಂಬುದೇ ನನ್ನ ಮಾನಸಿಕ ಕಾಯಿಕ ಆಶೀರ್ವಾದವು ನಿನಗೆ. "

ಗುಣೇಂದ್ರನ ನೇತ್ರಗಳಿಂದ ನೀರುಹನಿಗಳು ಒಂದೇಸವನೆ ಉದುರುತ್ತಿರುವುದನ್ನು ಹೇಮಾ ಚಂದ್ರಮನ ಬೆಳಕಿನಲ್ಲಿ ನೋಡಿದಳು. ಅವನ ಪಾದಗಳ ಮೇಲೆ ಮಸ್ತಕವಿಟ್ಟು ವಂದಿಸಿ, ಮೆಲ್ಲಮೆಲ್ಲನೆ ಎದ್ದುಹೋದಳು. ಈ ಬಗೆಯಾಗಿ ಅವಳು ಎಷ್ಟೋ ಸಲ ಮೆಲ್ಲಗೆ ಹೊರಟುಹೋಗಿದ್ದಾಳೆ. ಆದರೆ ಇವೊತ್ತು ಗುಣೇಂದ್ರನ ಸರ್ವಸಂಯಮವನ್ನೂ ಸಮಸ್ತಧೈರ್ಯವನ್ನೂ ಬೇರುಸಹಿತ ಕಿತ್ತೊಗೆದು ಹೋದಳು. ಬಹುದಿನಗಳಿಂದ ದೊರೆಯಬೇಕಾದ ಸುಅವಸರವು ಇವೊತ್ತು ತನ್ನೆದುರಿಗಿಂದ ಹರಿದ್ಹೋಯಿತು, ಅದನ್ನು ತಾನು ಹಿಡಿಯದಾದೆ! ಎಂಬ ಅನುಭವವು ಅವನಿಗೆ ಆಗುತ್ತಿದೆ. ಹೇಮಾ ತನ್ನನ್ನು ಎಷ್ಟು ಹೃತ್ಪೂರ್ವಕವಾಗಿ ಪ್ರೀತಿಸುತ್ತಿರುವಳೆಂಬುದನ್ನು ಆತ ಅರಿತಿದ್ದ. ಆಕೆಯ ಬಾಯಿಂದ ಇಂದು ಸ್ಪಷ್ಟವಾಗಿ ಕೇಳಿಯೂ ತನ್ನ ಮನದ ಮಾತನ್ನು ಆತ ಹೇಳದಾದ. ಸುಲೋಚನೆಯು ಸತ್ತಮೇಲೆ ಇಂದು ಹೇಳಬೇಕು, ನಾಳೆ ಹೇಳಬೇಕು ಎಂದು ಯೋಚಿಸುತ್ತಿದ್ದರೂ ಹೇಳದಾದ. ಅವಳ ಹತ್ತಿರ ಘಟಸರ್ಪವೊಂದು ಮಲಗಿದೆ, ಸ್ಪರ್ಶಿಸುತ್ತಲೆ ಎಚ್ಚರಿಯುವುದು ಎಂದು ಅವನಿಗೆನಿಸುತ್ತಿದ್ದಿತು. ಈ ಹೆದರಿಕೆಯಿಂದಲೇ ಅವನು ಇದುವರೆಗೆ ಅತ್ತ ಕೈಚಾಚದಾದ, ಇವೊತ್ತು ಆ ಅಂಜಿಕೆಯೇ ಅವನ ಕೈಯನ್ನು ಮುಂದೆ ಚಾಚಗೊಡಲಿಲ್ಲ.

ದಿನಾಲು ಪ್ರಾತಃಕಾಲ ಸ್ನಾನ ಮಾಡಿದ ನಂತರ ಹೇಮಾ ಅವನಿಗೆ ನಮಸ್ಕಾರ ಮಾಡಲು ಬರುತ್ತಿದ್ದಳು. ಮರುದಿನ ಅವಳು ಬರುತ್ತಲೆ ತನ್ನ ಎಲ್ಲ ಸಂಕೋಚವನ್ನು ಒಂದೆಡೆ ಇರಿಸಿ ಗುಣೇಂದ್ರ ಅವಳನ್ನು ಕೇಳಿದ " ಹೇಮಾ, ನಿನ್ನೆ ನೀನು ವಿಧವಾವಿವಾಹದ ವಿಚಾರವಾಗಿ ಏಕೆ ಕೇಳಿದ್ದೆ ? "

" ಒಂದು ವರ್ತಮಾನಪತ್ರದಲ್ಲಿ ಓದಿದ್ದೆ. "

" ವಿಧವಾ ವಿವಾಹವು ಒಳಿತಾದುದೆಂದು ನೀನು ತಿಳಿಯುವೆಯೇನು ? "

" ರಾಮ, ರಾಮ. ಅದು ವಿವಾಹವೆ ? "

" ಏಕಲ್ಲ ? ಸಂಸಾರದ ಎಲ್ಲ ಜಾತಿಗಳಲ್ಲೂ ವಿಧವಾವಿವಾಹವಾಗುತ್ತದೆ. ಬ್ರಾಹ್ಮಣರೊಬ್ಬರೆ ಅದಕ್ಕೆ ಹೊರತಾಗಿದ್ದಾರೆ. "

" ಇರಬಹುದು ! " ಎನ್ನುತ್ತ ಹೇಮಾ ಹೊರಟಳು; ಅವಳನ್ನು ಕರೆದು " ಇನ್ನೊಂದು ಮಾತಿದೆ ಹೇಮಾ " ಎಂದ ಗುಣೇಂದ್ರ.

ಹೇಮಾ ಹಿಂತಿರುಗಿನಿಂತು " ಏನು ? " ಎಂದಳು.

" ನಿನ್ನ ವಯಸ್ಸೆಷ್ಟು "

" ಹದಿನಾರು. "

" ಈವಾಗಿನಿಂದಲೆ ಸನ್ಯಾಸಿಯಾಗಿರುವೆಯೇನು ? "

ಸ್ವಲ್ಪ ನಸುನಕ್ಕು " ಮತ್ತೇನು ಮಾಡಲಿ ? ನನ್ನ ಭಾಗ್ಯ, ನಿನ್ನ ಬುದ್ಧಿ ! " ಎಂದಳು ಹೇಮಾ.

ಕ್ಷಣಹೊತ್ತು ಹೇಮಾನ ಮುಖವನ್ನು ನೋಡುತ್ತ ನಿಂತು "—ಹಾಗಾದರೆ ಮತ್ತಾವದಾರಿಯೂ ಇಲ್ಲವೆ ?— ಉಪಾಯವೂ ಇಲ್ಲವೆ ? " ಎಂದು ಕೇಳಿದ ಗುಣೇಂದ್ರ.

" ಇಲ್ಲ ಗುಣೇಂದ್ರಣ್ಣಾ, ಇಲ್ಲ. ಯಾವ ದಾರಿಯೂ ಇಲ್ಲ, " ಎಂದು ಹೇಮಾ ಹೊರಟು ಹೋದಳು.

ದಿನದಿನಕ್ಕೂ ಪರಿಪೂರ್ಣ ಯೌವನವು ಹೇಮಾನ ದೇಹದ ಮೂಲೆಮೂಲೆಯಲ್ಲಿ ತುಂಬಿ ಬೆಳೆಯತೊಡಗಿದಂತೆ ಆಕೆಯ ಧರ್ಮ-ಕರ್ಮಗಳೂ ಅದನ್ನು ದಾಟಿ ಮುಂಪರಿಯತೊಡಗಿದುವು. ಗುಣೇಂದ್ರ ಎಲ್ಲವನ್ನೂ ನೋಡಿದ, ಆದರೆ ಧೈರ್ಯವಾಗಿ ಮನದ ಬಯಕೆಯನ್ನು ಬಿಚ್ಚಿ ಹೇಳಲಾರದವನಾದ. ಹೇಮಾನಲ್ಲಿ ಅದೇನು ಇದ್ದಿತೊ, ಅದಕ್ಕೆ ಎಲ್ಲರೂ ಅಂತರಂಗದಲ್ಲಿ ಅಂಜುತ್ತಿದ್ದರು. ಆಕೆಯ ತಾಯಿಯೂ ಆಕೆಗೆ ಅಂಜುತ್ತಿದ್ದಳು, ಗುಣೇಂದ್ರನೂ ಅಂಜುತ್ತಿದ್ದ. ಹೀಗೆಯೆ ಎಷ್ಟೋ ದಿವಸಗಳು ಕಳೆದುವು. ಒಂದು ದಿನ ಗುಣೇಂದ್ರ ಕಚೇರಿಗೆ ಹೋಗುವ ಸಿದ್ಧತೆ ಮಾಡುತ್ತಿದ್ದ, ಹೇಮಾ ಬಂದಳು. ಕಪಾಟಿನೊಳಗಿಂದ ಚೆಕ್‌ಪುಸ್ತಕವನ್ನು ಗುಣೇಂದ್ರ ಕೈಯಲ್ಲಿಕೊಟ್ಟು " ಹಿಂತಿರುಗಿ ಬರುವಾಗ ಬ್ಯಾಂಕಿನಿಂದ ೫೦೦ ರೂಪಾಯಿಗಳನ್ನು ತೆಗೆದುಕೊಂಡು ಬನ್ನಿ " ಎಂದಳು.

" ಒಳ್ಳೇದು "—ಎಂದು ಚೆಕ್‌ಪುಸ್ತಕವನ್ನು ಜೇಬಿನಲ್ಲಿರಿಸಿದ.

" ತಾಳಿ ಸ್ವಲ್ಪ, ಮನೆಯ ವೆಚ್ಚಕ್ಕೂ ರೂಪಾಯಿಗಳಿಲ್ಲ; ಇನ್ನೂರುರೂಪಾಯಿ ಜಾಸ್ತಿ ತೆಗೆದುಕೊಂಡು ಬನ್ನಿ. "

ಗುಣೇಂದ್ರ ಆಶ್ಚರ್ಯದಿಂದ " ಐನೂರು ರೂಪಾಯಿ ಏತಕ್ಕೆ ಮತ್ತೆ ? " ಎಂದ.

" ಅವು ? ನಾನು ನಾಳೆ ಕಾಶಿಗೆ ಹೋಗಬೇಕಾಗಿದೆ. "

ಗುಣೇಂದ್ರ ಕುರ್ಚಿಯಮೇಲೆ ಕುಳಿತ. ಬಳಿಕ "ನಾಳೆ ಕಾಶಿಗೆ ಹೋಗುವೆಯಾ? ಈ ವಿಚಾರವಾಗಿ ಯಾರ ಅಭಿಪ್ರಾಯವನ್ನೂ ತೆಗೆದುಕೊಳ್ಳುವುದು ಉಚಿತವಲ್ಲವೆಂದು ತಿಳಿದೆಯಾ ? " ಎಂದ.

ಹೇಮಾ ಅಪ್ರತಿಭಳಾಗಿ " ನಿನ್ನ ಆಜ್ಞೆಯನ್ನು ಪಡೆದುಕೊಂಡನಂತರ ಹೋಗುವೆ " ಎಂದಳು.

" ನಾಳೆ ಹೋಗಬೇಕೆಂದು ನಿಶ್ಚಯಿಸಿ ಬಿಟ್ಟಿರುವೆ. ಆಜ್ಞೆಯನ್ನು ಯಾವಾಗ ತೆಗೆದುಕೊಳ್ಳುವಿ ? ಜೊತೆಗೆ ಯಾರು ಬರುವರು ?"

" ಮಾನದಾ ಮತ್ತು ಜವಾನ ಬರುವರು. ಇವೊತ್ತು ರಾತ್ರಿಯೆ ನಿನಗೆ ಹೇಳ ಬೇಕೆಂದಿದ್ದೆ. ನಾಳೆ ಹೋಗಲಾ ಗುಣೇಂದ್ರಣ್ಣ ?"

" ಒಳ್ಳೆದು ಹೋಗು "—ಎಂದು ಗುಣೇಂದ್ರ ಕಚೇರಿಗೆ ಹೋದ.

ಸಾಯಂಕಾಲವಾದ ನಂತರ ಹೇಮಾ ನೋಟುಗಳನ್ನೂ ರೂಪಾಯಿಗಳನ್ನೂ ಕಪಾಟಿನಲ್ಲಿಟ್ಟು ಬೀಗಹಾಕಿ ಗುಣೇಂದ್ರನ ಬಳಿಬಂದು " ನಾಳೆ ಹೋಗುವುದಾಗುವುದಿಲ್ಲ" ಎಂದು ಹೇಳಿದಳು.

" ಏಕೆ ?"

" ಇವೊತ್ತು ಮಧ್ಯಾಹ್ನ ಅಡಿಗೆಯವನ ತಾಯಿಗೆ ಕಾಯಿಲೆಯೆಂದು ತಂತಿ ಬಂದಿತ್ತು. ಅವನಿಗೆ ಮೂರು ತಿಂಗಳಿನ ಸಂಬಳಕೊಟ್ಟು ರಜೆಯನ್ನಿತ್ತು ಕಳಿಸಿದ್ದೇನೆ. ಅವನು ಹೋಗಿದ್ದಾನೆ."

" ಅಡಿಗೆ ಯಾರು ಮಾಡುವರು ?"

" ಅಡಿಗೆಯವನು ಸಿಕ್ಕುವವರೆಗೆ ನಾನೇ ಮಾಡುವೆ. ಗುಣೇಂದ್ರಣ್ಣ, ನೀನಿನ್ನು ಮದಿವೆ ಮಾಡಿಕೊ ?"

" ಏಕೆ ?"

" ಏಕೆ? ಮದಿವೆ ಮಾಡಿಕೊಳ್ಳದಿದ್ದರೆ ಮನೆತನವನ್ನು ಯಾರು ನಡೆಯಿಸುವರು? ನಿನ್ನ ಉಪಚಾರವನ್ನಾರು ಮಾಡುವರು ?"

" ನೀನು."

ಹೇಮಾ ನಕ್ಕು " ನಾನು ಚಿರಕಾಲದವರೆಗೆ ಈ ಮನೆಯ ಭಾರವನ್ನು ಹೊತ್ತುಕೊಂಡಿರುವೆನೆ? ನನಗೆ ಮತ್ತೇನನೂ ಮಾಡಬೇಕಾಗಿಲ್ಲವೆ ?" ಎಂದಳು.

" ನನ್ನ ಕುಶಲತೆಯನ್ನು ನೋಡಿಕೊಂಡು ನನ್ನನ್ನು ಉಪಚರಿಸುತ್ತಿರುವುದು ಕಾರ್ಯವಲ್ಲವೇನು ?"

ಇದು—ಇದುವರೆಗೆ ಹೇಮಾ ನಗುತ್ತಿದ್ದಳು. ಕ್ಷಣಮಾತ್ರದಲ್ಲಿ ಅವಳ ನಗೆಯು ಗಾಳಿಯಾಯಿತು. ಅವಳು ಗಂಭೀರಳಾಗಿ " ಇದೇನು ತಮಾಷೆಮಾಡುತ್ತಿರುವೆ ಗುಣೇಂದ್ರಣ್ಣ ? ಮತ್ತೆಂದೂ ಇಂತಹ ಮಾತನ್ನಾಡಬೇಡ" ಎಂದಳು.

ಗುಣೇಂದ್ರನಿಗೆ ಮಾತನಾಡಲಾಗಲಿಲ್ಲ. ಅವನು ಅವಳ ಮುಖದ ಕಡೆಗೆ ದಂಗು ಬಡಿದವನಂತೆ ನೋಡುತ್ತ ನಿಂತುಬಿಟ್ಟ. ಹೇಮಾ ಎದ್ದು ಹೊರಟುಹೋದಳು.



# ವಿಧವೆಗೆ ವಿವಾಹವೇ?

೬

ಹೇಮಾ ಎರಡು ತಿಂಗಳು ಕಾಶಿಯಲ್ಲಿದ್ದಳು; ಗುಣೇಂದ್ರನಿಗೆ ಕಾಯಿಲೆಯಾಗಿರುವುದನ್ನು ಕೇಳಿ ಪುನಃ ಕಲಕತ್ತೆಗೆ ಬಂದಳು. ಅವಳು ಬರದೆ ಇದ್ದರೆ ಕಾಯಿಲೆಯು ಕೈಮೀರಿ ಹೋಗಬಹುದಾಗಿದ್ದಿತು. ಅವಳು ಬಂದು ಚೆನ್ನಾಗಿ ಸೇವೆಶುಶ್ರೂಷೆ ಮಾಡಿ ಅವನನ್ನು ಚೆನ್ನಾಗಿ ಗುಣಪಡಿಸಿದಳು.

ಹೊರಗೆ ಜೋರಾಗಿ ಮಳೆ ಬೀಳುತ್ತಿತ್ತು. ಗುಣೇಂದ್ರ ತನ್ನ ಮಂಚದ ಮೇಲೆ ಕುಳಿತುಕೊಂಡು ಕಿಟಕಿಯೊಳಗಿಂದ ಅದನ್ನು ನೋಡುತ್ತಿದ್ದ, ಹೇಮಾನ ವಿಚಾರವಾಗಿ ಚಿಂತಿಸುತ್ತಿದ್ದ. ಒಂದು ಬದಲಾವಣೆಯನ್ನು ಆತ ಕಂಡ. ದಿನಾಲು ಬೆಳಿಗ್ಗೆ ಹೇಮಾ ಅವನಿಗೆ ವಂದಿಸಲು ಬರುತ್ತಿದ್ದಳು; ಆದರೆ ಈ ಸಲ ಬರಲಿಲ್ಲ. ಹೇಮಾನಿಗೆ ಕರೆತರಲು ದಾಸಿಗೆ ಹೇಳಿದ. "ಜಪಮಾಡುತ್ತಿದ್ದಾರೆ ಅವರು" ಎಂದು ಉತ್ತರ ಬಂದಿತು.

ಸುಮಾರು ಎರಡು ಗಂಟೆಗಳಾದ ಮೇಲೆ ಹೇಮಾ ಗುಣೇಂದ್ರನ ರೂಮಿಗೆ ಬಂದು "ನನ್ನನ್ನು ಕರೆಕಳುಹಿದ್ದೆಯಾ?" ಎಂದಳು.

"ಹೌದು. ಸ್ವಲ್ಪ ಕುಳಿತುಕೊ."

"ಆದರೆ ಇನ್ನೂ ನನ್ನ ಜಪ ಮುಗಿದಿಲ್ಲ."

"ಎರಡು ಗಂಟೆಯಾದರೂ ಜಪ ಮುಗಿಯಲಿಲ್ಲ?"

"ಎರಡು ಗಂಟೆಗಳಲ್ಲೇನಾಗಬೇಕು? ಗುರುಗಳು ಕನಿಷ್ಠ ಎರಡುಸಾವಿರ ಜಪ ಮಾಡಬೇಕೆಂದು ಹೇಳಿದ್ದಾರೆ."

"ಗುರುಗಳು ಹೇಳಿದ್ದಾರೆ? ಯಾವ ಗುರು?"

"ಕಾಶಿಗೆ ಹೋಗಿ ಯಾರ ಬಳಿ ಗುರುಮಂತ್ರವನ್ನು ತೆಗೆದುಕೊಂಡೆನೊ ಅವರು. ಅವರು ಕಾಶೀವಾಸಿಯಾದ ಸನ್ಯಾಸಿಗಳು. ಆಹಾ, ಅವರನ್ನು ನೋಡಿದ ಕೂಡಲೆ ಪುನಃ ಸಂಸಾರದ ಜೊಂಜಾಟದಲ್ಲಿ ಬರಲು ಇಚ್ಛೆಯಾಗುವುದಿಲ್ಲ!

ಇನ್ನೆಂದು ಅವರ ದರ್ಶನವಾಗುವುದೊ ಎಂದು ಯೋಚಿಸುತ್ತಿರುತ್ತೇನೆ. ನಾಳೆ–ನಾಡದು ಇಷ್ಟರಲ್ಲಿಯೆ ಕಾಶಿಗೆ ಹೋಗಬೇಕೆಂದು ಬಯಸುತ್ತೇನೆ."

ಗುಣೇಂದ್ರ ಸ್ವಲ್ಪ ಹೊತ್ತು ಸುಮ್ಮಗಿದ್ದು "ನಾಳೆ–ನಾಡದು ಹೇಗೆ ಹೋಗುವಿ ಹೇಮಾ? ನನಗಿನ್ನೂ ಚೆನ್ನಾಗಿ ಗುಣವಾಗಿಲ್ಲ. ನೀನು ಹೋದರೆ ನನ್ನನ್ನು ನೋಡಿ ಕೊಳ್ಳುವವರಾರು!" ಎಂದ.

ಹೇಮಾ ಅಪ್ರತಿಭಳಾಗಿ "ಅದೇನೂ ಇಲ್ಲ. ಮೂರು ನಾಲ್ಕು ದಿನಗಳಲ್ಲಿ ನಿನಗೆ ಚೆನ್ನಾಗಿ ಗುಣವಾಗುವುದು" ಎಂದಳು.

"ಹಾಗಾದರೆ ಅಲ್ಲಿಯವರೆಗೆ ಮೂರು-ನಾಲ್ಕು ದಿನವಾದರೂ ಇರುವೆಯಲ್ಲ?"

"ಸರಿ. ಇರುವೆ." ಎಂದು ಹೇಮಾ ಹೋಗತೊಡಗಿದಳು, ಗುಣೇಂದ್ರ ಪುನಃ ಅವಳನ್ನು ಕೂಗಿ ಕರೆದು "ನಾಳೆ–ನಾಡದು ಹೋಗಿಬಿಡು. ಆದರೆ ಪುನಃ ಎಂದು ಹಿಂತಿರುಗಿ ಬರುವೆ?" ಎಂದ.

"ಬೇಗ ಹಿಂತಿರುಗಲಿಕ್ಕಿಲ್ಲ ನನಗೆ ತಿಂಗಳಾ ನೂರುರೂಪಾಯಿ ಕಳುಹುತ್ತಿರು. ಅದಕ್ಕೂ ಕಡಮೆಯಲ್ಲಿ ಅಲ್ಲಿ ನಿರ್ವಾಹವಾಗಲಾರದು."

"ರೂಪಾಯಿಗಳ ಮಾತಿರಲಿ. ನೂರೇಕೆ? ಇನ್ನೂರು ಬೇಕಾದರೂ ಕಳು ಹುವೆ. ನಿಜವಾಗಿಯೂ ನೀನು ಹಿಂತಿರುಗಿ ಬರಲಾರೆಯಾ?"

"ಏತಕ್ಕೋಸ್ಕರ ಬರಬೇಕು ಈವಾಗ?"

"ನಾನು ಸಾಯುವ ಸುದ್ದಿ ತಿಳಿದರೆ ಬರುವೆಯಾ?

ಹೇಮಾ ವ್ಯಥೆಯಿಂದ "ಹೀಗೇಕೆ ಆಡುವಿ ಗುಣೇಂದ್ರಣ್ಣ?"

"ಯಾರಿಗೆ ಹೇಳಲಿಕ್ಕಾಗುತ್ತದೆ ಯಾರ ಮೃತ್ಯು ಯಾವಾಗ ಆಗುತ್ತದೆಂದು? ಅದಕ್ಕೋಸ್ಕರ ಮೊದಲೆ ತಿಳಿಸಿರುವುದು ಒಳಿತು. ಮೃತ್ಯುಪತ್ರದಲ್ಲಿ ನಿನಗೆ ರೂಪಾಯಿ ಕೊಡುವ ವ್ಯವಸ್ಥೆ ಮಾಡಿಡುವೆ. ಈ ಮನೆಯೂ ನಿನ್ನ ಹೆಸರಿನಲ್ಲಿಯೆ ಇರುವುದು. ನೀನು ಇಲ್ಲಿಗೆ ಬಂದರೆ ಇದೇ ಮನೆಯಲ್ಲಿ, ಇದೇ ರೂಮಿನಲ್ಲಿ ಮಲಗು, ಇಷ್ಟೇ ನನ್ನ ಕೊನೆಯ ಮನದಬಯಕೆ."

ಹೇಮಾ ಏನೋ ಹೇಳಬೇಕೆಂದಿದ್ದಳು. ಅವನ್ನು ಮನದಲ್ಲಿಯೆ ನುಂಗಿ "ನಿನಗೆ ಯಾವ ಭಯವೂ ಇಲ್ಲ ಗುಣೇಂದ್ರಣ್ಣಾ. ಈಗ ಸ್ವಲ್ಪ ಅಶಕ್ತತೆಯಿದೆ, ಆದುದರಿಂದಲೆ ಈ ಮಾತುಗಳು ಹೊಳೆಯುವವು" ಎಂದಳು.

"ಇರಬಹುದು"—ಎಂದು ಗುಣೇಂದ್ರ ಹೊರಗೆ ಮಳೆಯ ಕಡೆಗೆ ನೋಡ ತೊಡಗಿದ. ಹೇಮಾ ವಿಷಣ್ಣವದನದಿಂದ ಹೊರಟುಹೋದಳು.

ಸಾಯಂಕಾಲವಾದಮೇಲೆ ಗುಣೇಂದ್ರನ ರೂಮಿನಲ್ಲಿ ಕತ್ತಲಾಗಿರುವುದನ್ನು ನೋಡಿ ಹೇಮಾ ಕೋಪದಿಂದ "ನಂದಾ, ಬಾಬೂಜಿಯವರ ರೂಮಿನಲ್ಲಿ ದೀಪ ವನ್ನೇಕೆ ಹಚ್ಚಲಿಲ್ಲ?" ಎಂದು ಕೂಗಿದಳು.

ಗುಣೇಂದ್ರ ರೂಮಿನೊಳಗಿಂದ "ನಾನು ಬೇಡವೆಂದು ಹೇಳಿದ್ದೆ" ಎಂದ.

ನಂದಾ ಓಡಿಬಂದ. ಅವನಿಗೆ ದೀಪಹಚ್ಚಿಕೊಂಡು ಬರಹೇಳಿ ಅವಳು ಅವನ ಕತ್ತಲುರೂಮಿನಲ್ಲಿ ಸೇರಿ ಅವನ ಪಾದದ ಬಳಿಯಲ್ಲಿ ಮಂಚದ ಮೇಲೆ ಕುಳಿತಳು. ನಂದಾ ದೀಪಹಚ್ಚಿ ಮೇಜಿನಮೇಲಿಟ್ಟು ಹೊರಟುಹೋದ. ಹೇಮಾ ಗುಣೇಂದ್ರನ ಪಾದಗಳ ಮೇಲೆ ಕೈಯಿಡುವಷ್ಟರಲ್ಲಿಯೆ ಅವನು ಕಾಲನ್ನು ಎಳೆದುಕೊಂಡ. ಹೇಮಾ ದುಃಖದಿಂದ "ನೀನಿನ್ನು ಪಾದವನ್ನು ನನಗೆ ಸ್ಪರ್ಶ ಮಾಡಗೊಡಲಾರೆಯಾ?" ಎಂದಳು.

"ಆವಶ್ಯಕತೆಯೇನಿದೆ ಇನ್ನು? ನಿನ್ನ ಗುರುಗಳು ಬೇಡವೆಂದು ಹೇಳಿರ ಬಹುದು."

ಕಾಶಿಯಿಂದ ಬಂದ ಮೇಲೆ ಚರಣಸ್ಪರ್ಶ ಮಾಡಲಿಲ್ಲವೆಂಬುದನ್ನೇ ಲಕ್ಷಿಸಿ ಗುಣೇಂದ್ರ ಹೀಗೆ ಎನ್ನುತ್ತಿರಬಹುದೆಂದು ಹೇಮಾ ತಿಳಿದುಕೊಂಡಳು. ಆದರೆ ಅವಳು ಯಾವ ಉತ್ತರವನ್ನೂ ಕೊಡಲಿಲ್ಲ. ಸುಮ್ಮಗೆ ಕುಳಿತಿದ್ದಳು. ಸ್ವಲ್ಪ ಹೊತ್ತಾದ ಬಳಿಕ "ಗುಣೇಂದ್ರಣ್ಣ, ನನ್ನ ಮೇಲೆ ಕೋಪಿಸಿಕೊಂಡಿರುವೆಯಾ?"

"ನಾನೆಂದಾದರೂ ನಿನ್ನ ಮೇಲೆ ಕೋಪಿಸಿಕೊಂಡಿರುವೆನೆ ಹೇಮಾ?"

ಹೇಮಾ ಅನುತಪ್ತಳಾಗಿ "ಎಂದೂ ಇಲ್ಲ--ಆದರೆ ಹೀಗೆಲ್ಲ ಇವೊತ್ತು ಏಕೆ ಮಾತನಾಡುತ್ತಿದ್ದಿ?" ಎಂದಳು.

"ಏನು ಮಾತನಾಡುತ್ತಿದ್ದೆ?"

"ಮೃತ್ಯುಪತ್ರದ ವಿಚಾರವಾಗಿ—ಇತ್ಯಾದಿ. ಗುಣೇಂದ್ರಣ್ಣ, ನಿನಗೆ ಬೇಗ ಗುಣವಾಗುವದು. ಗಾಬರಿಯಾಗಬೇಡ."

ಗುಣೇಂದ್ರ ಸ್ವಲ್ಪ ನಸುನಗುತ್ತ "ನನಗೆ ಗುಣವಾಗುವುದಿಲ್ಲವೆಂಬುದನ್ನರಿತು ಗಾಬರಿಯಾಗಿರುವೆನೆಂದು ನೀನು ತಿಳಿದಿರುವೆಯಾ?" ಎಂದ.

ಹೇಮಾಗೆ ಅಳುವು ಬಂದಂತಾಯಿತು. " ನಿನ್ನ ಪಾದಕ್ಕೆರಗುವೆ, ಹೀಗೆಲ್ಲ ಮಾತನಾಡಬೇಡ ಗುಣೇಂದ್ರಣ್ಣ ! ನಿನಗೆ ಗುಣವಾಗದಿದ್ದರೆ ನಾನು ಹೇಗೆ ಬದುಕಿರುವೆ ? " ಎಂದಳು.

" ನೀನು ಹೊರಟುಹೋದ ಮೇಲೆ ನಾನು ಹೇಗೆ ಬದುಕಿರುವೆ ? ಅದಕ್ಕಾಗಿ ನಿನಗೆ ನಾನು ಹೋಗಗೊಡದಿದ್ದರೆ ? ''

ಹೇಮಾ ಸ್ವಲ್ಪ ಹೊತ್ತು ಸುಮ್ಮಗಿದ್ದು " ನನ್ನನ್ನು ಇಲ್ಲಿ ನಿಲ್ಲಿಸುವುದರಿಂದೇನು ನಿನಗೆ ಲಾಭ ? " ಎಂದಳು.

" ಲಾಭ ! ''–ಮುಂದೆ ಅವನಿಗೆ ಮಾತನಾಡಲಾಗಲಿಲ್ಲ. ಹೊರಗೆ ಮಳೆಯನ್ನು ನೋಡುತ್ತ ಸುಮ್ಮಗೆ ಕುಳಿತ. ದೊಡ್ಡ ದೊಡ್ಡ ಹನಿಗಳು ಕಿಡಕಿಯ ಮೇಲೆ ಬೀಳುತ್ತಿದ್ದುವು. ಒಮ್ಮೆಗೆ ಭರದಿಂದ ಗಾಳಿಯು ಬೀಸಿ ಬಂದು ರೂಮಿನಲ್ಲಿನ ದೀಪವನ್ನು ಆರಿಸುವ ಸಿದ್ಧತೆ ಮಾಡಿತು. ಕೆಳಗೆ ಆಳುಮಕ್ಕಳ ಅಸ್ಪಷ್ಟ ಗಲಭೆಯ ಧ್ವನಿಯಾಗುತ್ತಿದ್ದಿತು. ಆದರೂ ಇಬ್ಬರೂ ಸುಮ್ಮಗೆ ಕುಳಿತಿದ್ದರು. ಚಿಕ್ಕಂದಿನಿಂದಲೇ ಗುಣೇಂದ್ರ ಆತ್ಮಾಭಿಮಾನಿಯೂ ಸಂಯಮಿಯೂ ಆಗಿದ್ದ ಅವನು ತನ್ನ ಧೈರ್ಯಕ್ಕೆ ಬಲವಾದ ಆಣೆಕಟ್ಟನ್ನು ಹಾಕಿದ್ದ. ಆದರೆ ಸುಲೋಚನೆಯ ಕೊನೆಯ ಮಾತುಗಳು ಇಲಿಯಂತೆ ಆ ಅಣೆಕಟ್ಟಿನ ತಳಹದಿಯಲ್ಲಿ ತೂತು ಮಾಡುತ್ತ ಬರುತ್ತಿದ್ದುವು. ಅದರಲ್ಲಿ ನೀರು ಸೇರಿ ತೂತುಗಳನ್ನು ದೊಡ್ಡದನ್ನಾಗಿ ಮಾಡುತ್ತಿದ್ದಿತು. ಕಟ್ಟು ಎಂದು ಕುಸಿದು ಬಿದ್ದೀತೆಂಬುದರ ಭರವಸೆಯಿರಲಿಲ್ಲ. ಉನ್ಮತ್ತಳಾದ ಬಾಹ್ಯಸೃಷ್ಟಿಯ ಕಡೆಗೆ ನೋಡಿ ಮೊದಲಿನಿಂದ ಕೊನೆಯ ವರೆಗಿನ ಎಲ್ಲ ಮಾತುಗಳ ಸಿಂಹಾವಲೋಕನವನ್ನು ಮಾಡಲೆತ್ನಿಸಿದ ಆದರೆ ಅವನ ರುಗ್ಣಶರೀರವೂ ಅಶಕ್ತಮಿದುಳೂ ಅದನ್ನು ಮಾಡಗೊಡಲಿಲ್ಲ.

ಹೇಮಾ ಒಮ್ಮೆಗೆ " ಗುಣೇಂದ್ರಣ್ಣಾ, ಸುಮ್ಮಗೇಕಾದಿ ? ಏನು ಯೋಚಿಸುತ್ತಿರುವಿ ? " ಎಂದಳು.

" ಏನಿಲ್ಲ, ಏನಿಲ್ಲ. ಅದನ್ನು ನಿನಗೆ ಹೇಳಲಾಗುವುದಿಲ್ಲ—ಹೇಳಿದರೂ ಅದರರ್ಥ ನಿನಗಾಗದು. ಆದರೆ—ಎಂದಾದರೂ ನಿನ್ನ ಬುದ್ಧಿಯಲ್ಲಿ ಬದಲಾವಣೆಯಾದರೆ—ನಾನಲ್ಲಿಯವರೆಗೆ ಜೀವಿಸಿದ್ದರೆ—ಬಾ ! ''

ಹೇಮಾ ಸ್ವಲ್ಪ ಹಿಂದೆ ಸರಿದು ಕುಳಿತು " ನನಗೆಲ್ಲವೂ ತಿಳಿಯುತ್ತದೆ. ಅಯ್ಯೋ ಭಾಗ್ಯವೆ ! ರಕ್ಷಕನೆ ಭಕ್ಷಕನಾಗುವನಲ್ಲ ! ನೀನೇ ನನ್ನನ್ನು ಕೊನೆಗೆ ದುರ್ಗತಿಯ ಕಡೆಗೆ ಎಳೆದೊಯ್ಯಬೇಕೆನ್ನುವಿಯಾ ! " ಎಂದಳು.

ಗುಣೇಂದ್ರ ಇಲ್ಲಿಯ ತನಕ ಒಂದು ದಿಂಬಿಗೆ ಆತು ಕುಳಿತಿದ್ದ. ಈಗ ಸ್ವಲ್ಪ ಎದ್ದು ನೇರವಾಗಿ ಕುಳಿತ. ಅವನ ಕಣ್ಣುಗಳು ಮಿಂಚಿದುವು. "ಛೀ ಹೇಮಾ, ಸ್ವಲ್ಪ ಅರಿತುಕೊಂಡು ಮಾತನಾಡು! ನೀನು ಏನು ಹೇಳುತ್ತಿದ್ದೀಯಾ ಇದನ್ನು?" ಎಂದ.

ಹೇಮಾ ಮಿಂಚಿನಂತೆ ಎದ್ದು "ಅರಿತುಕೊಂಡೇ ಆಡುತ್ತಿದ್ದೇನೆ! ನೀನು ತಿರುಗಿಸಿ ಹೊರಳಿಸಿ ಹೇಳುವುದನ್ನು ನಾನು ಸ್ಪಷ್ಟವಾಗಿ ನಿನಗೆ ಹೇಳುತ್ತಿದ್ದೇನೆ. ನೀನು ನನ್ನನ್ನು ಕೆಡಿಸಬೇಕೆನ್ನುವಿ! ವಿಧವೆಯ ವಿವಾಹವೆಂತು ಗುಣೇಂದ್ರಣ್ಣ? ಧರ್ಮವನ್ನರಿತೂ ಅಧರ್ಮದ ಕಡೆಗೆ ಹೆಜ್ಜೆಯಿಕ್ಕುವಷ್ಟು ಅರಿಯದ ಬಾಲಿಕೆಯಲ್ಲ ನಾನು. ನನಗೆ ನಿನ್ನ ರೂಪಾಯಿಗಳು ಬೇಡ, ನಿನ್ನ ಆಶ್ರಯ ಬೇಡ, ನಿನ್ನದಾವುದೂ ನನಗೆ ಬೇಡ. ಅತ್ತೆಯ ಮನೆಗೆ ಹೋಗಿ ಅಂಗಳ ಕಸ ತೆಗೆದು ಹೊಟ್ಟೆತುಂಬಿ ಕೊಳ್ಳುವೆ, ಇದೇ ಒಳ್ಳೆಯದು. ನನಗೆ ನಿನ್ನ ಐಶ್ವರ್ಯದ ಆವಶ್ಯಕತೆಯಿಲ್ಲ. ನನಗೆ ಇಂಥ ದುರ್ಬುದ್ಧಿ ಬೇಡ! ಅವೊತ್ತು ನಿನ್ನ ಬುದ್ಧಿ ಎಲ್ಲಿ ಹೋಗಿತ್ತು? ಇವೊತ್ತಿನಂತೆ ಅವೊತ್ತು ಏಕೆ ಆಡಲಿಲ್ಲ?" ಎಂದು ಬಿಟ್ಟಳು.

ಗುಣೇಂದ್ರ ಅದೇ ರೀತಿ ಸ್ಥಿರವಾಗಿ ಕುಳಿತು "ಹೇಮಾ, ನನ್ನಿಂದ ತಪ್ಪಾಯಿತು, ಕ್ಷಮಿಸು. ನಾನು ಪೀಡಿತನು—ಒಂದು ಸಲ ಯೋಚಿಸಿ ನೋಡು" ಎಂದ.

"ಯೋಚಿಸಿ ನೋಡಿದೆ. ಇವೊತ್ತಿಲ್ಲದಿದ್ದರೂ ನಾಳೆಯಾದರೂ ಕ್ಷಮಿಸಿಯೆ ಕ್ಷಮಿಸುವೆ. ದರ್ಪದಿಂದ ಎಲ್ಲಿಂದ ಇಲ್ಲಿಗೆ ಬಂದಿದ್ದೆನೋ ಅಲ್ಲಿಗೇ ನಾಳೆ ನಾನು ಹೊರಟುಹೋಗುವೆ. ಏನಾದರೂ ಪರವಾಯಿಲ್ಲ. ಅಲ್ಲಿಯೆ ಬಿದ್ದುಕೊಂಡಿರುವೆ. ಅದೇ ನನ್ನ ಕಾಶಿ, ಅದೇ ನನ್ನ ವೈಕುಂಠ ಎಂದು ತಿಳಿದುಕೊಳ್ಳುವೆ. ನೀನೂ ನನ್ನನ್ನು ಕ್ಷಮಿಸು, ಗುಣೇಂದ್ರಣ್ಣ—ನಾನು ಹೋಗುವೆ."

ಹೇಮಾ ಹೊರಟುಹೋದಳು, ಗುಣೇಂದ್ರ ಹಾಗೆಯೆ ನೇರವಾಗಿ ಕುಳಿತಿದ್ದ—ಸಿಡಿಲುಬಡೆಯಿಸಿಕೊಂಡ ಮರದಂತೆ ಒಳಗಿಂದ ಸುಟ್ಟ ಹೆಮ್ಮರದಂದೆ ಕುಳಿತಿದ್ದ! ಬೀಳುವ ಶಕ್ತಿಯೂ ಅವನಲ್ಲಿರಲಿಲ್ಲ.



# ಗುಣೇಂದ್ರನ ಕಾಹಿಲೆ!

೭

ಪುನಃ ದುರ್ಗಾಪೂಜೆಯು ಬಂದಿತು. ನಸುಕಿನಲ್ಲಿದ್ದ ಹೇಮಾ ಕಿಟಕಿಯ ಬಳಿ ನಿಂತುಕೊಂಡು ಅರುಣಕಿರಣಗಳನ್ನು ನೋಡುತ್ತಿದ್ದಳು. ಬೀದಿಯಲ್ಲೆಲ್ಲೊ ನೌಬತ್ತು ಬಾರಿಸುತ್ತಿದ್ದಿತು. ಅದರ ರಾಗವು ಶರತ್ಕಾಲದ ಸಂಪೂರ್ಣ ಕರುಣೆಯಿಂದೊಡಗೂಡಿ ಅವಳ ಶರೀರದಲ್ಲಿ ಸಂಚರಿಸುತ್ತಿದ್ದಿತು. ಅವಳಿಗೆ ತಿಳಿಯದಲೆ ಕಂಬನಿಗಳು ಆಕೆಯ ಕಣ್ಣೊಳಗಿಂದ ಹರಿಯುತ್ತಿದ್ದವು. ಎಷ್ಟೋ ದಿನಗಳಾದುವು, ಗುಣೇಂದ್ರನ ಸಮಾಚಾರವು ಅವಳಿಗೆ ಗೊತ್ತಾಗಲಿಲ್ಲ. ಅವಳು ಮನದಲ್ಲಿಯೆ ಯೋಚಿಸತೊಡಗಿದಳು—ಗುಣೇಂದ್ರಣ್ಣಾ ಎಲ್ಲಿರಬಹುದು? ಹೇಗಿರಬಹುದು? ಕಲಕತ್ತೆಯಿಂದ ಹೊರಟುಬರುವಾಗ "ಹೇಮಾ, ಇನ್ನೆರಡು ದಿನ ಇದ್ದು ಹೋಗು. ಕೋಪಿಸಿಕೊಳ್ಳಬೇಡ" ಎಂದು ಅಂದಿದ್ದ. ಅಭಿಮಾನಿಯ ಕಂಬನಿಗಳ ಬೆಲೆಯು ಆತನಿಗೆ ಗೊತ್ತಿರಲಿಲ್ಲ. ಆವೊತ್ತು ಕಾಯಿಲೆಯಲ್ಲಿದ್ದರೂ, ಅಶಕ್ತನಾಗಿದ್ದರೂ ಕೆಳಗಿಳಿದು ಬೀದಿಯ ವರೆಗೆ ಬಂದು ಎಂದಿದ್ದ. 'ಹೇಮಾ, ನಿನ್ನ ಮನಸ್ಸು ಇನ್ನೂ ಸ್ವಾಭಾವಿಕ ಅವಸ್ಥೆಯಲ್ಲಿಲ್ಲ. ಯಾವ ಕಾರಣದಿಂದಲೆ ಆಗಲಿ, ಕದಡಿಹೋಗಿದೆ. ನನ್ನ ಮಾತು ಕೇಳಿ ಒಂದು ದಿನವಾದರೂ ನಿಂತುಹೋಗು? ಆದರೆ ಹೇಮಾ ಕೇಳಲಿಲ್ಲ; ಗಾಡಿಯಲ್ಲಿ ಕುಳಿತುಬಿಟ್ಟಳು. ಗುಣೇಂದ್ರ ಗಾಡಿಯ ಕಿಡಕಿಯ ಬಳಿಗೂ ಹೋಗಿ ಬಿನ್ನವಿಸಿಕೊಂಡಿದ್ದ "ನನಗೋಸ್ಕರ ಹೇಳುತ್ತಿಲ್ಲ ಹೇಮಾ, ನಿನಗೋಸ್ಕರ ಹೇಳುತ್ತಿದ್ದೇನೆ. ಇವೊತ್ತಿನ ಮಟ್ಟಿಗಾದರೂ ಗಾಡಿಯಿಂದಿಳಿದು ಬಾ? ಇದಕ್ಕೆ ಉತ್ತರವಾಗಿ ಹೇಮಾ ಗಾಡಿಯವನಿಗೆ ಗಾಡಿಯನ್ನು ಸಾಗಿಸಲು ಹೇಳಿದ್ದಳು. ಹೇಮಾ ಯೋಚಿಸುತ್ತ ಯೋಚಿಸುತ್ತ ಬಂದು ಹಾಸಿಗೆಯ ಮೇಲೆ ಬಿದ್ದುಕೊಂಡು ಅತ್ತು ಅತ್ತು ತನ್ನ ಕೂದಲುಗಳನ್ನೆಲ್ಲ ತೊಯಿಸಿಕೊಂಡಿದ್ದಳು. ಕೊನೆಗೆ ಅವಳಿಗೆ ನಿದ್ರೆ ಬಂದಿತು. ಇಷ್ಟು ದುಃಖಕ್ಕೆ ಒಂದು ಕಾರಣವೂ ಇದ್ದಿತು. ತೀರ್ಥಯಾತ್ರೆಗೆ ಹೋಗಲು ಐವತ್ತು ರೂಪಾಯಿ ಬೇಕೆಂದು ಕಾರಕೂನನಿಗೆ ಹೇಳಿಕಳುಹಿದ್ದಳು. 'ಚಿಕ್ಕ ರಾಯರ ಅಪ್ಪಣೆಯಾಗದ ವಿನಾ ಕೊಡಲಾಗುವುದಿಲ್ಲ' ಎಂದು ಕಾರಕೂನ ಹೇಳಿಕಳುಹಿದ್ದ-ಹೇಮಾ ತನ್ನ ಮೈದುನನೊಡನೆ ಮಾತಾಡುತ್ತಿರಲಿಲ್ಲ. ಅವಳು ಬಾಗಿಲು ಮರೆಯಲ್ಲಿ ನಿಂತುಕೊಂಡು "ಲಾಲಾಜೀ, ನಾನು ಬೇಡಿದರೂ ಕಾರಕೂನರು ಐವತ್ತು ರೂಪಾಯಿ ಕೊಡಲಾರರೆ?" ಎಂದಳು.

" ಇಲ್ಲ. ನಿಮಗೆ ಊಟಕ್ಕೆ ಉಟ್ಟುಕೊಳ್ಳಲಿಕ್ಕೆ ಮಾತ್ರ ಕೊಡಲಾಗುತ್ತದೆ. ರೂಪಾಯಿಗಳನ್ನು ಕೊಡಲಾಗುವುದಿಲ್ಲ."

" ಇದನ್ನು ನಾನು ಬಲ್ಲೆ ಲಾಲಾಜೀ! ರೂಪಾಯಿಗಳಿಗಾಗಿ ನಿಮ್ಮೊಡನೆ ವ್ಯಾಜ್ಯವಾಡುವ ಪ್ರವೃತ್ತಿ ನನ್ನಲ್ಲಿ ಇಲ್ಲ. ಆದರೆ ನನ್ನನ್ನು ಇಷ್ಟು ಅಸಹಾಯಳೆಂದು ಭಾವಿಸಬೇಡಿ. ಕೊಡುವ ಇಚ್ಛೆಯಿದ್ದರೆ ಕೊಡಿರಿ, ಇಲ್ಲವೆ ಹೋದರೆ, ನಿಮಗೆ ಹೇಳುತ್ತೇನೆ – ರೂಪಾಯಿಗಳ ಅಹಂಕಾರ, ಜೋರು ನಿಮಗಿದ್ದರೆ ನಿಮ್ಮೊಡನೆ ವೈರತ್ವ ಬೆಳೆಯಿಸಿ, ನಿಮ್ಮ ಮನೆಯ ಇಟ್ಟಿಗೆಯನ್ನು ಕೀಳಿಸಿ ಗಂಗೆಯಲ್ಲಿ ಹರಿಸಿಬಿಡುವೆ."

ಹೀಗಾದ ಸ್ವಲ್ಪ ಹೊತ್ತಿನಲ್ಲಿಯೆ ರೂಪಾಯಿಗಳು ಬಂದುವು, ಆದರೆ ಹೇಮಾ ಅವನ್ನು ತೆಗೆದುಕೊಳ್ಳದೆ ಅಂಗಳದಲ್ಲಿ ಎಸೆದುಬಿಟ್ಟು ಮನೆಯೊಳಗೆ ಹೋಗಿ ಬಾಗಿಲು ಹಾಕಿಕೊಂಡು ಮಲಗಿಬಿಟ್ಟಳು. ಇಡೀ ದಿನ ಏನೂ ತಿನ್ನಲಿಲ್ಲ, ಉಣ್ಣಲಿಲ್ಲ. ಒಳಗಿಂದೊಳಗೇ ಯಾರನ್ನೊ ನೆನೆದುಕೊಂಡು ಅಳುತ್ತಿದ್ದಳು. ಬೆಳಗಾದ ಮೇಲೆ ಏಳು ಗಂಟೆಗೆ ಎಚ್ಚರಾಯಿತು. ಸ್ನಾನಮಾಡಿ ಸಂಧ್ಯಾವಂದನೆಗೆ ಕುಳಿತಿದ್ದಳು. ಅಷ್ಟರಲ್ಲಿ ಒಬ್ಬ ದಾಸಿಯು ಬಂದು " ಅಮ್ಮಾ, ನಿಮ್ಮ ಅಣ್ಣನ ಕಡೆಯಿಂದ ಮೂರು ನಾಲ್ಕು ಜನರು ಮಂಗಲದ್ರವ್ಯಗಳನ್ನು ತಂದಿದ್ದಾರೆ" ಎಂದು ಹೇಳುತ್ತಿರುವಷ್ಟರಲ್ಲಿ ಮಾನದಾ ಬಂದು ನಮಸ್ಕರಿಸಿದಳು. ಮಾನದಾನನ್ನು ನೋಡುತ್ತಲೆ ಎಲ್ಲ ದುಃಖವನ್ನೂ ಮರೆತು ಅವಳನ್ನಪ್ಪಿಕೊಂಡು ಅಳತೊಡಗಿದಳು ಮಕ್ಕಳಂತೆ. ನಿನ್ನೆಯಿಂದ ಕಂಬನಿಗರೆಯುವುದು ನಿಂತಿರಲಿಲ್ಲ, ಇವೊತ್ತು ಮಾನದಾನನ್ನು ನೋಡಿದ ಕೂಡಲೆ ಒಂದು ವರ್ಷದಿಂದ ತಡೆದು ನಿಂತಿದ್ದ ಕಂಬನಿಗಳು ಹೊರಬಿದ್ದು ಹೊಳೆಯಾಗಿ ಹರಿದುವು. ಮಾನದಾಳನ್ನು ತನ್ನ ರೂಮಿಗೆ ಎಳೆದೊಯ್ದು " ಗುಣೇಂದ್ರಣ್ಣ ಪತ್ರ ಕೊಟ್ಟಿದ್ದಾರೆಯೆ ನನಗೆ!" ಎಂದು ಕೇಳಿದಳು.

" ಪತ್ರವನ್ನು ಕೊಡಲಿಲ್ಲವೆ!"

ಹೇಮಾಗೆ ನಂಬಿಕೆಯಾಗಲಿಲ್ಲ. ಪುನಃ " ಕೊಡಲಿಲ್ಲವೆ?" ಎಂದು ಕೇಳಿದಳು.

" ಇಲ್ಲಮ್ಮ, ಪತ್ರ ಬರೆಯಲು ಅವರಿಗೆ ಕುಳಿತುಕೊಳ್ಳಲಾಗುತ್ತಿದೆಯೆ ?"

ಹೇಮಾನ ಮುಖ ಕಳೆಗುಂದಿತು. ಅವಳು ತನ್ನನ್ನು ಸಾವರಿಸಿಕೊಳ್ಳುತ್ತ ಅತ್ಯಂತ ಕಷ್ಟದಿಂದ " ಕುಳ್ಳಿರಲಾಗುವುದಿಲ್ಲ? ಏನಾಗಿದೆ ಅವರಿಗೆ?" ಎಂದು ಕೇಳಿದಳು.

" ನಿಮಗೇನು ಗೊತ್ತಿಲ್ಲವೆ?"

" ಇಲ್ಲ. ಹೇಳು ಏನಾಗಿದೆ?"

“ಏನು ಹೇಳಲಮ್ಮಾ? ನೀವು ಹೊರಟುಬಂದ ಮರುದಿವಸದಿಂದಲೆ ಪುನಃ ಜ್ವರ ಬರತೊಡಗಿದುವು. ಗುಣ ಹೊಂದಿದರು. ಪುನಃ ಜ್ವರ ಬರಲಾರಂಭಿಸಿದುವು. ಹೀಗೆಯೆ ಗುಣ ಹೊಂದುವರು, ಪುನಃ ಕಾಯಿಲೆ ಬೀಳುವರು. ಹಿಂತಿರುಗಿ ಹೋಗಿ ಅವರನ್ನು ನೋಡುವೆನೊ ಇಲ್ಲವೊ, ಭರವಸೆಯಿಲ್ಲ.”

“ಮತ್ತೇನು ಸಮಾಚಾರ?”

“ಕೇಳಬೇಡಮ್ಮಾ, ಕಾಯಿಲೆಯ ಸಮಾಚಾರ ಕೇಳಿ ವರ್ಧಮಾನದಿಂದಲೊ, ಎಲ್ಲಿಂದಲೊ ಅವರ ಚಿಕ್ಕಮ್ಮ ಬಂದಳು, ಚಿಕ್ಕಪ್ಪ ಬಂದರು; ಆ ಮೇಲೆ ಯಾರಾರೊ ಬಳಗದವರು ಬಂದು ತುಂಬಿಬಿಟ್ಟಿದ್ದಾರೆ. ಮನೆಯಲ್ಲಿ ಈಗ ಜಾಗವೇ ಇಲ್ಲ.”

“ಅವರೆಲ್ಲರನ್ನೂ ನಾನು ಕಳಿಸಿಬಿಡುವೆ. ಮತ್ತೇನು?”

“ಎಲ್ಲರೂ ಉಣ್ಣುತ್ತಿದ್ದಾರೆ, ಕುಡಿಯುತ್ತಿದ್ದಾರೆ. ಚಕ್ಕಂದದಿಂದ ಇದ್ದಾರೆ. ಬಾಬೂಜಿಯವರು ಮೇಲೆ ಹಾಸಿಗೆಯ ಮೇಲೆ ಬಿದ್ದಿರುತ್ತಾರೆ; ಡಾಕ್ಟರು, ವೈದ್ಯರು ಬರುತ್ತಿಲ್ಲ. ಔಷಧೋಪಚಾರವಿಲ್ಲ; ಪಥ್ಯ-ಪಾನೀಯವಿಲ್ಲ. ಹವಾ ಬದಲಾಯಿಸಿದರೆ ಗುಣವಾಗುವುದೆಂದು ಹೇಳುತ್ತಾರೆ. ಯಾರು ಕರೆದುಕೊಂಡು ಹೋಗಬೇಕು?”

“ನೀವೆಲ್ಲಾರೂ ಏನು ಮಾಡುತ್ತಿದ್ದಿರಿ? ನಂದಾ ಏಕೆ ಕರೆದುಕೊಂಡು ಹೋಗಲಿಲ್ಲ?”

ಮಾನದಾ ಹಣೆಬಡೆದುಕೊಂಡು “ಅವನೊಬ್ಬ ಬಾಬೂಜಿಯವರ ಹಳೆಯ ನಂಬಿಗಸ್ತ ಸೇವಕನಿದ್ದ. ಚಿಕ್ಕಮ್ಮನ ಮಗ ಅವನನ್ನು ಹೊಡೆದು ಹೊರಗೆ ಹಾಕಿಬಿಟ್ಟ. ಆ ಹುಡುಗ ಸಾರಾಯಿಕುಡಿಯುತ್ತಾನೆ. ಮನೆಗೆ ಬಂದು ತುಂಬಾ ಗಲಾಟೆ ಮಾಡುತ್ತಾನೆ. ಎಲ್ಲರೂ ಅವನಿಗೆ ಹೆದರುತ್ತಾರೆ.” ಎಂದಳು.

ಹೇಮಾ ಸ್ವಲ್ಪ ಸುಮ್ಮಗಿದ್ದು “ಒಂದು ಮಾತು ಸತ್ಯವಾಗಿ ಹೇಳುವಿಯಾ? ನನ್ನ ಗುಣೇಂದ್ರಣ್ಣ ಬದುಕಲಾರರೆ?” ಎಂದಳು.

“ಏಕೆ ಬದುಕಲಾರರಮ್ಮಾ? ಬಂದು ತೋರಿಸಿರಿ, ಉಪಚಾರ ಮಾಡಿರಿ. ಅವಶ್ಯವಾಗಿ ಬದುಕುವರು. ಹೀಗೆಯೆ ಕಳೆದರೆ ಎಷ್ಟು ದಿನ ಬದುಕುವರು?”

ಹೇಮಾ ಸ್ವಲ್ಪ ಹೊತ್ತು ಕಣ್ಣುಮುಚ್ಚಿಕೊಂಡು ಕುಳಿತಳು. ಆ ಮೇಲೆ ಎದ್ದು ನಿಂತು “ಮಾನದಾ, ನಿನ್ನ ಬಳಿ ಹಿಂತಿರುಗಿಹೋಗಲು ರೂಪಾಯಿಗಳಿವೆಯೆ?” ಎಂದು ಕೇಳಿದಳು.

" ಹೂಂ ಹೂಂ. ಇಲ್ಲೇಕೆ? ನಿಮಗೆ ಗೊತ್ತೆ ಇದೆ, ಬಾಬೂಜಿಯವರು ಒಂದು ರೂಪಾಯಿ ಬೇಕಾಗುತ್ತಿದ್ದರೆ ಹತ್ತು ರೂಪಾಯಿ ಕೊಟ್ಟು ಕಳುಹುವರೆಂದು. ನನ್ನ ಹತ್ತರವೇ ರೂಪಾಯಿಗಳಿವೆ " ಎಂದು ಸೆರಗಿನಲ್ಲಿ ಕಟ್ಟಿದ ನೋಟುಗಳನ್ನು ತೋರಿಸಿದಳು.

" ಯಾವಾಗ ಹೋಗುವಿ ? ನಾಳೆಯೆ ? "

" ಹೌದಮ್ಮಾ, ನಾಳೆಯೆ ಹೋಗಬೇಕು. ಅವರ ಬಳಿ ನಾನೊಬ್ಬಳೆ ಹಳೆಯ ದಾಸಿ. ಎಲ್ಲರೂ ಹೊಸಬರೆ. ಎಷ್ಟು ದಿವಸ ತಾಳಿಯಾರು ? ಚಿಕ್ಕಮ್ಮನಂತೆಯೆ ಚಿಕ್ಕಪ್ಪ, ಚಿಕ್ಕಮ್ಮನ ಮಗ, ಇಷ್ಟರು-ನೆಂಟರು. ಎಲ್ಲರನ್ನೂ ಒಂದೇ ಅಚ್ಚಿನಲ್ಲಿ ಹಾಕಿ ಮಾಡಿದಂತಿದೆ. ನನ್ನ ಮನಸ್ಸು ಗಟ್ಟಿಯೆಂದೇ ಇವೊತ್ತಿನ ವರೆಗೆ ತಾಳಿದ್ದೇನೆ. ಚಿಕ್ಕಮ್ಮನ ಮಗ ಅಭಯ ನನ್ನನ್ನೂ ಹೊಡೆಯಲು ಬಂದಿದ್ದ ಒಂದು ದಿನ. ಬಾಬೂಜಿ ಯವರು ಸತ್ತರೆ ಒಳ್ಳೆಯದೆಂದು ಎನ್ನುತ್ತಾನೆ ಪೋಲಿ. "

ಹೇಮಾನ ಕಣ್ಣುಗಳಿಂದ ಕಿಡಿಗಳು ಹೊರಡಲಾರಂಭಿಸಿದುವು. " ಹೋಗಿ ನೋಡುತ್ತೇನೆ ಅವರನ್ನ. ಸ್ಟೀಮರು ಯಾವಾಗ ಹೊರಡುವುದು ಗೊತ್ತೆ ? " ಎಂದು ಕೇಳಿದಳು.

" ಇನ್ನೊಂದು ಘಂಟೆಯ ಮೇಲೆ. ಬರುವಾಗ ಕೇಳಿಯೆ ಬಂದಿದ್ದೇನೆ. "

" ಅದರಿಂದೇನೆ ಹೊರಡುವೆ. ಗಾಡಿಯನ್ನು ತರಿಸು. "

" ಇವೊತ್ತೇ ಹೊರಡುವಿಯೇನಮ್ಮಾ? ದಿನ ನೆಟ್ಟಗಿಲ್ಲ ಇಂದು. "

" ಒಳ್ಳೆಯ ದಿನವಿದೆ—ತಡಮಾಡಬೇಡ, ಗಾಡೀ ತರಿಸು. "



# ಕೊನೆಯ ಸೇವೆ

೮

ಅದೇ ದಿವಸ ಸಾಯಂಕಾಲ ಅಭಯನಿಗೆ ಎದುರಿಗೆ ಕೂತು ಇನ್ನೆರಡು ಪುರಿ ತಿನ್ನಲು ತಾಯಿ ಒತ್ತಾಯಪಡಿಸುತ್ತಿದ್ದಳು. ಅಲ್ಲಿಯೆ ಅಟ್ಟದ ಮೇಲೆ ಹೋಗಲು ಮೆಟ್ಟಲುಗಳಿದ್ದುವು. ಅಪರಿಚಿತ ಹೇಮಾನನ್ನು ಆಶ್ಚರ್ಯದಿಂದ ನೋಡಿ ಚಿಕ್ಕಮ್ಮ ಕೇಳಿದಳು "ಯಾರಮ್ಮಾ ನೀನು ?"

"ನಾನು ಪರದೇಸಿ" ಎಂದು ಹೇಮಾ ನೇರವಾಗಿ ಮೆಟ್ಟಲುಗಳನ್ನೇರಿ ನಡೆದಳು. ಅವಳ ಅಪೂರ್ವ ರೂಪದ ಕಡೆಗೆ ತೋಳನಂತೆ ಅಭಯ ನೋಡುತ್ತ ಕುಳಿತ.

ಹೇಮಾ ಗುಣೇಂದ್ರನ ರೂಮಿಗೆ ಹೋಗಿ ನೋಡಿದಳು.—ಅವನು ಗೋಡೆಯ ಕಡೆಗೆ ಮುಖಮಾಡಿ ಮಲಗಿದ್ದ. ಎಚ್ಚತ್ತಿರುವನೊ ನಿದ್ರೆ ಹೋಗುತ್ತಿರುವನೊ ಅವಳಿಗೆ ಗೊತ್ತಾಗಲಿಲ್ಲ. ತಲೆದಿಂಬಿನ ಬಳಿ ಬೀಗದ ಕೈಗೊಂಚಲು ಬಿದ್ದಿದ್ದಿತು ಮೊದಲು ಅದನ್ನು ಎತ್ತಿಕೊಂಡು ಹೇಮಾ ತನ್ನ ಸೆರಗಿನಲ್ಲಿ ಕಟ್ಟಿಕೊಂಡಳು. ಟೇಬಲ್ಲಿನ ಮೇಲೆ ಒಂದೆರಡು ಔಷಧದ ಸೀಸೆಗಳು ಬಿದ್ದಿದ್ದುವು. ತಾರೀಕು ಬದಲಾಯಿಸಿರಲಿಲ್ಲ. ಹದಿನೈದು ದಿನ ಹಿಂದಿನ ತಾರೀಕು ಟೇಬಲ್ಲಿನ ಮೇಲಿತ್ತು. ಎಲ್ಲವೂ ಸ್ಪಷ್ಟವಾಯಿತು. ಬಳಿಕ ಖಜಾನೆಯನ್ನು ತೆರೆದು ಚೆಕ್‌ಬುಕ್ ತೆಗೆದುಕೊಂಡು ರುಜುವನ್ನು ಹೋಲಿಸಿ ನೋಡತೊಡಗಿದಳು. ಇಷ್ಟರಲ್ಲಿ ಮೇಲೆ ಬಂದು ನೋಡಿ ದಿಙ್ಮೂಢಳಾಗಿ ನಿಂತಳು. ಬಳಿಕ ದೊಡ್ಡ ದನಿಯಿಂದ "ನೀನಾರೆ ಖಜಾನೆ ತೆರೆಯುವುದಕ್ಕೆ ?" ಎಂದು ಕೇಳಿದಳು.

"ಕಿರುಚುವಿಯೇಕೆ ? ಅವರ ನಿದ್ರೆ ಭಂಗವಾದೀತು ?"

ಮತ್ತಿಷ್ಟು ಜೋರಿನಿಂದ "ಹೂಂ ! ಕಿರುಚುವಿಯೇಕೆ ?" ಎಂದು ಕೂಗಿದಳು.

ಗುಣೇಂದ್ರ ಎಚ್ಚರಿದ್ದ. ಹೊರಳಿ ನೋಡಿದ. ಹೇಮಾ "ನಾನು ತೆರೆಯದಿದ್ದರೆ ಮತ್ತಾರು ತೆರೆಯುವವರು ? ನೀನೆ ?" ಎಂದಳು.

ಗುಣೇಂದ್ರ ನೋಡುತ್ತಿದ್ದ. ಇಬ್ಬರ ನೋಟವೂ ಅತ್ತ ಹೋಗಲಿಲ್ಲ. ಚಿಕ್ಕಮ್ಮ ಸಿಟ್ಟಿಗೆದ್ದಳು. ಗುಣೇಂದ್ರ ಮೆಲ್ಲಗೆ "ಹೇಮಾ, ಯಾವಾಗ ಬಂದೆ ನೀನು ?" ಎಂದ.

"ಈವಾಗ ಬಂದೆ. ಆಕೆಗೆ ತಿಳಿಹೇಳು.—ನಿನ್ನ ಸಾಮಾನಕ್ಕಾಗಿ ಯಾವುದಾದರೂ ನೆವದಿಂದ ಇಲ್ಲಿಗೆ ಯಾರೂ ಬಂದು ಗಲಾಟೆ ಮಾಡಬಾರದೆಂದು. ಇದೆ

ಲ್ಲವೂ ನನ್ನದು, ಇದನ್ನು ಚೆನ್ನಾಗಿ ತಿಳಿಸಿಹೇಳಿ, ಆಕೆಗೆ ಇಲ್ಲಿಂದ ಹೊರಟು ಹೋಗಲು ಹೇಳು."

ಗುಣೇಂದ್ರನಿಗೆ ಎಲ್ಲವೂ ತಿಳಿಯಿತು. ನಕ್ಕು ನುಡಿದ "ಅದೇ ಸಂಬಂಧದಿಂದ ಇಷ್ಟು ದಿವಸದ ಮೇಲೆ ಖಜಾನೆ ತೆರೆಯಲು ಬಂದಂತೆ ಕಾಣುತ್ತದೆ."

ಹೇಮಾ ಚಿಕ್ಕಿನ ಹಾಳೆಗಳನ್ನು ಎಣಿಸುತ್ತ "ಹೌದು" ಎಂದಳು.

ಚಿಕ್ಕಮ್ಮ ಕೇಳಿದಳು "ಇವಳಾರು ಗುಣೀ?"

"ನನ್ನ ತಂಗಿ."

ಉತ್ತರ ಕೇಳಿ ಹೇಮಾ ನಡುಗಿದಳು. ಒಂದು ಸಲ ಕಣ್ಣೆತ್ತಿ ಗುಣೇಂದ್ರನ ಕಡೆಗೆ ನೋಡಿ ಪುನಃ ನೋಟವನ್ನು ಕೆಳಗೆ ಇಳಿಸಿದಳು.

"ಹೇಗೆ? ನಾನೀವರೆಗೂ ಕೇಳಿರಲಿಲ್ಲ."

"ಕೋಪಿಸಿಕೊಂಡು ಹೊರಟು ಹೋಗಿದ್ದಳು—ಎಲ್ಲವೂ ಆಕೆಯದೇ ಚಿಕ್ಕಮ್ಮಾ" ಎಂದು ಸ್ವಲ್ಪದರಲ್ಲೇ ಗುಣೇಂದ್ರ ಹೇಳಿದ.

ಚಿಕ್ಕಮ್ಮನಿಗೆ ವಿಶ್ವಾಸವಾಗಲಿಲ್ಲ. ಅವಳಿಗೆ ತಿಳಿಯಲೂ ಇಲ್ಲ. ಸುಮ್ಮನೆ ಕೆಳಗೆ ಬಂದಳು. ಚಿಕ್ಕಮ್ಮ ಹೊರಟುಹೋದಮೇಲೆ ಹೇಮಾನ ಕಡೆಗೆ ನೋಡದೆಯೆ "ಸಾಯುವಾಗ ಈ ವಿಚಾರ ಅದ್ಹೇಗೆ ಬಂದಿತು?" ಎಂದು ಅವಳ ಮುಖನೋಡಿ ಬೆದರಿದ. ಹೇಮಾನ ಮುಖವು ಕಳೆಗುಂದಿದ್ದಿತು—ಅಕಸ್ಮಾತ್ ಕ್ರೋಧೀತಪಸ್ವಿಯ ಅಭಿಶಾಪದಿಂದ ಪಾಷಾಣವಾದಂತೆ!

ಗುಣೇಂದ್ರ ಅಂಜುತ್ತ ಕರೆದ "ಹೇಮಾ!" ಹೇಮಾ ಉತ್ತರವೀಯಲಿಲ್ಲ. ಅಲ್ಲಾಡಲೂ ಇಲ್ಲ. ನೆಟ್ಟನೋಟದಿಂದ ನೆಲವನ್ನು ನೋಡುತ್ತಿದ್ದಳು. ಗುಣೇಂದ್ರ ಅತ್ಯಂತ ವ್ಯಾಕುಲನಾಗಿ "ಹೇಮಾ, ಮಾತು ಕೇಳು" ಎಂದ.

ಹೇಮಾ ಉತ್ತರವಾಗಿ ಒಂದು ನೀಳವಾದ ಉಸಿರೆಳೆದು ಸ್ಥಿರವಾಗಿ ಕುಳಿ ತಂತೆಯೆ ಕುಳಿತಿದ್ದಳು. ಗುಣೇಂದ್ರ ಪ್ರಯತ್ನಪೂರ್ವಕವಾಗಿ ಎದ್ದು ಕುಳಿತು, ಬಹಳ ಜತನದಿಂದ ಹೇಮಾನ ಎದುರಿಗೆ ಹೋಗಿ ನಿಂತ ಕೂಡಲೆ ಹೇಮಾ ಅವನ ಚರಣಗಳ ಮೇಲೆ ಬಿದ್ದು, ಪಾದಗಳಲ್ಲಿ ಮುಖವನ್ನು ಮುಚ್ಚಿಕೊಂಡು ಅಳಲಾ ರಂಭಿಸಿದಳು—"ತಪ್ಪು ಮಾಡದೆ ಇದ್ದರೂ ನನ್ನನ್ನು ಎಲ್ಲರೂ ಶಿಕ್ಷಿಸುವರು—ಆದರೆ ನೀನೂ ಶಿಕ್ಷಿಸುವೆಯೆಂದು ನಾನು ಸ್ವಪ್ನದಲ್ಲೂ ಯೋಚಿಸಿರಲಿಲ್ಲ." ಎಂದಳು.

ಗುಣೇಂದ್ರ ಸುಮ್ಮಗಿದ್ದ. ಶ್ರಾವಣಮಾಸದ ಕಾರ್ಮೋಡಗಳಂತೆ ಆಕೆಯ ಕೇಶರಾಶಿಯು ಅವನ ಚರಣಗಳನ್ನು ಮುಚ್ಚಿದ್ದಿತು. ಅವನ್ನು ನೋಡುತ್ತ ಸ್ವಲ್ಪ

ಹೊತ್ತು ಅವನು ಹಾಗೆಯೆನಿಂತಿದ್ದ. ಬಳಿಕ ಮೆಲ್ಲನೆ ಕುಳಿತು, ಹೇಮಾನ ತಲೆಯ ಮೇಲೆ ಬಲಗೈ ಹಸ್ತವನ್ನಿಟ್ಟು ಶಾಂತಸ್ವರದಿಂದ ಎನ್ನತೊಡಗಿದ "ನಾನು ನಿನಗೆ ಶಿಕ್ಷಿಸುವೆನೆ ಹೇಮಾ! ನೀನು ನನ್ನನ್ನು ಪ್ರೀತಿಸಿದ್ದಿ, ಅದಕ್ಕಾಗಿ ನಾನು ನನ್ನನ್ನೂ ಶಿಕ್ಷಿಸಿಕೊಳ್ಳಲಿಲ್ಲ. ಇದು ಶಿಕ್ಷೆಯಲ್ಲ ತಂಗೀ, ನಾಲ್ಕು ವರ್ಷಗಳ ಘೋರ ದುಃಖದ ನಂತರ ಸಾಯುವುವಕ್ಕಿಂತ ಪೂರ್ವದಲ್ಲಿಯೆ ನನಗೆ ಶಾಂತಿಯು ಸಿಕ್ಕಿದೆ, ಕೊನೆಯ ಸಮಯದಲ್ಲಿ ಆ ದುರ್ಲಭವಸ್ತುವನ್ನೂ ನಾನು ನಿನಗೇ ಕೊಟ್ಟು ಹೋಗುವೆ— ನಡೆ, ನಾವು ಕಾಶಿಗೆ ಹೋಗೋಣ."

ಹೇಮಾ ಮುಖ ಮುಚ್ಚಿಕೊಂಡು ಅಳುತ್ತಿದ್ದಳು. ಬಳಿಕ ಎಂದಳು "ನಡೆ, ಇದೇ ನಿಮ್ಮ ಕೊನೆಯ ಆಜ್ಞೆ. ಇದನ್ನು ನಾನು ಹೇಗೆ ಸಹಿಸಬಲ್ಲೆ?"

"ಅವಶ್ಯವಾಗಿ ಸಹಿಸಬಲ್ಲೆ. ಪ್ರೇಮವನ್ನು ಮಹಾಮಹಿಮಾನ್ವಿತ ಮಾಡುವುದಕ್ಕೆ ವಿಚ್ಛೇದವು ನಿನ್ನಂಥ ಅತುಲ ಐಶ್ವರ್ಯವಂತಳ ಬಾಗಿಲಿಗೆ ಬಂದು ತನ್ನ ಕೈಗಳನ್ನು ಚಾಚಿದೆ, ಅದು ಕ್ಷುದ್ರಪ್ರೇಮದ ಗುಡಿಸಲಿಗೆ ತಿರಸ್ಕಾರದಿಂದ ಹೋಗಿಲ್ಲ ಎಂಬುದನ್ನು ನೀನರಿತಾಗ ಎಲ್ಲವನ್ನೂ ಸಹಿಸಬಲ್ಲೆ. ಅತೃಪ್ತವಾಸನಾ ಮಹತ್ಪ್ರೇಮದ ಪ್ರಾಣವೆಂದು ನೀನು ತಿಳಿದಾಗ, ಇವರಿಂದಲೇ ಯುಗಯುಗಗಳಲ್ಲಿ ಅಮರತ್ವವನ್ನು ಪಡೆದ ಮಾಧುರ್ಯವೂ ಅಮೂಲ್ಯ ನಯನನೀರಿನ ಬಿಂದುಗಳೂ ಸಂಗ್ರಹಿಸಿ ಇಡಲ್ಪಡುತ್ತವೆಂಬುದನ್ನು ನೀನು ತಿಳಿದಾಗ, ನೂರಾರು ವರ್ಷಗಳ ವರೆಗೆ ರಾಧೆಯ ವಿರಹವು ವೈಷ್ಣವರ ಪ್ರಾಣವಾಗಿರುವುದೇಕೆಂಬುದನ್ನೂ ವಿರಹವು ಪ್ರೇಮ–ಮಿಲನದ ಅಭಾವದಲ್ಲಿಯ ಸುಸಂಪೂರ್ಣವಾಗಿ ವ್ಯಥೆಯಲ್ಲಿ ಮಧುರವಾಗಿ ಏಕಿರುವುದೆಂಬುದನ್ನು ನೀನು ಅನುಭವಿಸಿ ತಿಳಿದಾಗ ನೀನು ಹೇಮಾ! ಎಲ್ಲವನ್ನು ಸಹಿಸಬಲ್ಲೆ! ಎದ್ದು ಕುಳಿತುಕೊ—ನಡೆ, ಇಂದೇ ನಾವು ಕಾಶಿಗೆ ಹೋಗೋಣ. ಜೀವನದ ಉಳಿದ ಕೆಲವು ದಿನಗಳಲ್ಲಿ ನೀನು ಮಾಡುವ ಕೊನೆಯ ಸೇವೆಯು ನಿನ್ನ ಪರಮಾತ್ಮನ ಆಶೀರ್ವಾದದಿಂದ ಅಕ್ಷಯವಾಗಿ ಉಳಿದು ನಿನಗೆ ನಿನ್ನ ಜೀವನಮಾರ್ಗದಲ್ಲಿ ಸುಖದಿಂದ—ಶಾಂತಿಯಿಂದ ಇಡುವುದು" ಎಂದು ಶಾಂತಸ್ವರದಿಂದ ಹೇಳಿದ **ಗುಣೇಂದ್ರ.**

